ಜಯತು ಭಗವಾನ್.

ಬಾಲಸರಸ್ವತೀ ಗ್ರಂಥಮಾಲಾ

# ಮಿಂಚಿನ ಗೊಂಚಲು

## ೧

## ಸೌಭಾಗ್ಯ ಸಂಪತ್ಕುಮಾರ.


ವಿದ್ವಾನ್

ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ

ವಿರಚಿತವಾದುದು.





ಮೈಸೂರು ಶ್ರೀಮತ್ಕನ್ಯಕಾಪರಮೇಶ್ವರೀ ಮುದ್ರಾಕ್ಷರಶಾಲೆಯಲ್ಲಿ

ಮುದ್ರಿಸಲ್ಪಟ್ಟು

ಪುಸ್ತಕ ವ್ಯಾಪಾರಿಗಳಾದ

ಎಚ್. ವೆಂಕಟರಾಮಯ್ಯ ಎಂಡ್‌ಸನ್ಸ್‌ರವರಿಂದ

ಪ್ರಚುರಪಡಿಸಲ್ಪಟ್ಟಿರುವುದು.

ಪ್ರಥಮಮುದ್ರಣ 1500 ಪ್ರತಿಗಳು.

1931.

ಬೆಲೆ ೬ ಆಣೆ.

|| ಶ್ರೀಃ ||

# ಮುನ್ನುಡಿ.

ನನ್ನ ಪರಮ ಹಿತೈಷಿಗಳಾದ ಶ್ರೀಮತ್ಕರ್ಣಾಟದೇಶಬಾಂಧವ ಮಹಾಶಯರು ಸತ್ಯಘಟನಾರೂಪವಾದ ಕಥಾವಿಶೇಷಗಳನ್ನು ರಚಿಸಿ, ತನ್ಮೂಲಕವಾಗಿ ಕನ್ನಡಿಗರಿಗೆ ಬಗೆಬಗೆಯ ಲೋಕಾನುಭವಗಳನ್ನುಂಟುಮಾಡಿಕೊಡುವುದರಿಂದ ದೇಶವು ಕ್ರಮಕ್ರಮವಾಗಿ ವೃದ್ಧಿಗೆ ಬರುವುದರಲ್ಲಿ ಆವ ಸಂಶಯವೂ ಇರಲಾರದೆಂದು ಅಡಿಗಡಿಗೂ ನನಗೆ ಸಲಹೆಯನ್ನುಕೊಡುತ್ತಿದ್ದರು. ಈಗ ನನ್ನ ಮಿತ್ರಮಹಾಶಯರ ಸಲಹೆಗಳೆಲ್ಲವೂ ಫಲೋನ್ಮುಖವಾಗುವ ಕಾಲವು ಒದಗಿಬಂದಂತಿರುವುದು. ಇದಕ್ಕೆ ಅನುಸಾರವಾಗಿಯೇ ಮೈಸೂರಿನ ಪುಸ್ತಕವ್ಯಾಪಾರಿಗಳಾದ ಮೆಸರ್ಸ್ ಎಚ್. ವೆಂಕಟರಾಮಯ್ಯ ಎಂಡ್ ಸನ್ಸ್‌ರವರು ಮುಂದೆ ಬಂದು ಈ ಬಗೆಯ ಕಥಾವಿಶೇಷಗಳನ್ನು ಮುದ್ರಿಸಿ ಪ್ರಚಾರಪಡಿಸುವುದಾಗಿ ನನಗೆ ಭರವಸೆಯನ್ನಿತ್ತರು. ಈ ಸುಯೋಗವನ್ನು ಸಾರ್ಥಕಗೊಳಿಸಲೋಸುಗ, "ಮಿಂಚಿನ ಗೊಂಚಲು" ಎಂಬ ಸಾಮಾನ್ಯ ನಾಮಧೇಯದಿಂದ ಅನೇಕ ಗ್ರಂಥಗಳನ್ನು ನಮ್ಮ ಪ್ರಿಯ ಪಾಠಕ ಮಹಾಶಯರ ಅವಗಾಹನೆಗಾಗಿ ರಚಿಸುವವನಾಗಿರುವೆನು ಒಂದೊಂದು ಕಥಾವಿಶೇಷವೂ ಹತ್ತು ಅಧ್ಯಾಯಗಳಿಂದ ಕೂಡಿದುದಾಗಿ ಪ್ರಾಯಿಕವಾಗಿ ನೂರು ಪುಟಗಳುಳ್ಳದಾಗಿರುವುದು. ಒಂದೊಂದು ಗ್ರಂಥದ ಕಥಾವಿಶೇಷವೂ ನಾತಿದೀರ್ಘವಾಗಿಯೂ, ನಾತಿಹ್ರಸ್ವವಾಗಿಯೂ ಇರುವುದರಿಂದ ಸ್ತ್ರೀಪುರುಷವಾಚಕ ಮಹಾಶಯರಿಗೆ ಬೇಸರವನ್ನುಂಟುಮಾಡಲಾರದೆಂದು ನಂಬಿರುವೆನು. ಈ ಮಿಂಚಿನ ಗೊಂಚಲಿನಲ್ಲಿ ಭಾಷೆಯು ಶುದ್ಧವಾಗಿಯೂ, ವಿಷಯವು ಗಂಭೀರವಾಗಿಯೂ, ರಚನೆಯು ಹೃದಯಂಗಮವಾಗಿಯೂ, ಮುದ್ರಣವು ಅಂದವಾಗಿಯೂ ಇರುವಂತೆ ಏರ್ಪಡಿಸಲಾಗಿರುವುದು. ನಮ್ಮ ಕನ್ನಡನಾಡಿನ ಸ್ತ್ರೀಪುರುಷರಲ್ಲಿ ಆಬಾಲವೃದ್ಧರೆಲ್ಲರೂ ಈ ಗ್ರಂಥಗಳನ್ನು ತರಿಸಿಕೊಂಡು ಓದಿ ಆನಂದಿಸಬೇಕೆಂಬ ಸದುದ್ದೇಶದಿಂದಲೇ ಇದರ ಬೆಲೆಯು ಸುಲಭವಾಗಿಡಲ್ಪಟ್ಟಿರುವುದು. ಆದುದರಿಂದ ನಮ್ಮ ದೇಶಬಾಂಧವ ಮಹಾಶಯರು ಈ ಸುಯೋಗವನ್ನು ಎಂದಿಗೂ ಕಳೆದುಕೊಳ್ಳಲಾರರೆಂದು ನಾವು ದೃಢವಾಗಿಯೂ ನಂಬಿರುವೆವು.

ಮಿಂಚಿನ ಗೊಂಚಲಿನಲ್ಲಿ ಮೊದಲನೆಯ ಪುಸ್ತಕವು ಮಂಗಳರೂಪವಾಗಿರಲೆಂದು ಪರ್ಯಾಲೋಚಿಸಿ, "ಸೌಭಾಗ್ಯ ಸಂಪತ್ಕುಮಾರ" ಎಂಬ ಹೆಸರಿನಿಂದ ಒಂದು ಕಥಾವಿಶೇಷವು ಉಲ್ಲೇಖಿಸಲ್ಪಟ್ಟಿರುವುದು. ಉದಾರ ಮಹಾಶಯರಾದ ಕನ್ನಡಿಗರ ಪ್ರೋತ್ಸಾಹವು ದೊರೆತಹಾಗೆಲ್ಲಾ ಅಪೂರ್ವ ಕಥಾವಿಶೇಷಗಳು ಹೊರಬೀಳುವುವು. ಆದುದರಿಂದ ಎಲ್ಲರೂ ಈ ಗ್ರಂಥಗಳನ್ನು ಓದಿ ಆನಂದಿಸುವುದಾದರೂ, ಆನಂದಿಸಿ ತತ್ತ್ವಗಳನ್ನು ಗ್ರಹಿಸುವುದಾದರೂ, ಗ್ರಹಿಸಿ ಆಚರಣೆಗೆ ತರುವುದಾದರೂ ಗ್ರಂಥಕರ್ತನಾದ ನನ್ನ ಶ್ರಮವು ಅಂದಿಗೆ ಸಾರ್ಥಕವಾದೀತು.

ಇತಿ, ದೇಶಭಾಷಾಭಿಮಾನಿವಶಂವದ,

**ಬಾಲಸರಸ್ವತೀ ನರಹರಿಶರ್ಮಾ.**



ಜಯತು ಭಗವಾನ್.

ಬಾಲಸರಸ್ವತೀ ಗ್ರಂಥಮಾಲಾ.

# ಮಿಂಚಿನ ಗೊಂಚಲು.

## ೧

# ಸೌಭಾಗ್ಯಸಂಪತ್ಕುಮಾರ.

ವಿದ್ವಾನ್

ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ

ವಿರಚಿತವಾದುದು.

---

## ಮೊದಲನೆಯ ಅಧ್ಯಾಯ.

**ಸುಂದರನಾದ ಬೀದಿಯ ಟಿಕಾರಿ. ಪಾಠಶಾಲಾ ವಿದ್ಯಾರ್ಥಿಗಳ ಬಾಲ್ಯದ ಆದರ. ಮರಹವಲ್ಲ, ಮೂರ್ಖ. ಭೂತದಯೆಯ ಪ್ರಥಮಾವತಾರ. ಸರಸ ವಿರಸ ಸಂವಾದ. ಬೆಳೆಯುವ ಪೈರು ಮಳೆಯಲ್ಲೇ ಗೊತ್ತು.**

ಸೂರ್ಯದೇವನು ಪಶ್ಚಿಮಸಮುದ್ರವನ್ನು ಸೇರುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿದ್ದನು. ನಂದನಗ್ರಾಮದ ಬಾಲಿಕಾಪಾಠಶಾಲೆಯ ವಿದ್ಯಾರ್ಥಿನಿಯರು ಅಂದಿನ ಪಾಠಗಳನ್ನು ಮುಗಿಸಿಕೊಂಡು ಆಟಕ್ಕಾಗಿ ಹೊರಬೀಳುತ್ತಿದ್ದರು. ಅವರಲ್ಲಿ ವಿನೋದಿನೀ ವಿಲಾಸಿನಿಯರೆಂಬ ಗೆಳತಿಯರಿಬ್ಬರು, ಹೂಗಳನ್ನು ಕೊಯ್ದುಕೊಂಡು ಬರುವುದಕ್ಕಾಗಿ ಬಲುದೂರ ಸಂಚಾರ ಮಾಡಿ ಕತ್ತಲೆಯಾಗುತ್ತಾ ಬಂದುದನ್ನು ಕಂಡು, ಬೇಗಬೇಗನೆ ಪಾಠಶಾಲೆಯ ಕಡೆಗೆ ಹಿಂದಿರುಗಿ ಬರುತ್ತಿದ್ದರು.

ವಿಲಾಸಿನಿಯು ತಟ್ಟನೆ ಬೆಚ್ಚಿಬೆದರಿದವಳಾಗಿ— ವಿನೋದ! ಇಲ್ಲಿ ಆರೋ ಸತ್ತು ಬಿದ್ದಿರುವಂತಿದೆ, ಎಂದು ಭಯದಿಂದ ನಡುಗುತ್ತಾ ಮಾತನಾಡಿದಳು.

ವಿನೋದಿನಿ— (ಭಯದಿಂದ ನೋಡಿ) ವಿಲಾಸ ! ಈತನು ಜ್ಞಾನತಪ್ಪಿ ಸತ್ತವನಂತೆ ಬಿದ್ದಿರುವನು. ನಡೆ, ಇಲ್ಲಿರುವುದು ತರವಲ್ಲ. ಇವನು ಒಂದು ವೇಳೆ ಎಚ್ಚೆತ್ತನೆಂದರೆ, ನಮ್ಮನ್ನು ಬಾಯಿಗೆ ಬಂದ ಹಾಗೆ ಬೈದರೂ ಬೈಯ ಬಹುದು. ಓಡಿ ಹೋಗುವ, ನಡೆ.

ವಿಲಾಸಿನಿ—ನಿನ್ನ ಮಾತಿನಂತೆ ಈತನ ದೇಹದಲ್ಲಿ ಪ್ರಾಣವಿರುವು ದಾದರೆ, ನಾವು ಇಲ್ಲಿಂದ ಓಡಿ ಹೋಗುವುದು ಆರು ಮಾಡುವ ಕೆಲಸ ? ಅನಾಥರನ್ನು ಉಪಚರಿಸಬೇಕೆಂದು ನಮ್ಮ ಪಂಡಿತ ಕಾತ್ಯಾಯನೀದೇವಿಯ ವರು ಹೇಳುತ್ತಿರುವುದನ್ನು ನೀನು ಕೇಳಿಲ್ಲವೇ ?

ವಿನೋದಿನಿ—ಹೇಳುವುದು ಮಾಡುವುದಕ್ಕಿಂತಲೂ ಸುಲಭ. ನಾನು ಅರೆಗಳಿಗೆಯೂ ಇಲ್ಲಿರಲಾರೆನು. ಬೀದಿಯ ಬಿಕಾರಿಗಳನ್ನು ಉಪಚರಿಸುವುದೇ ನನ್ನ ಕೆಲಸವಲ್ಲ.

ವಿಲಾಸಿನಿ—ನೀನು ಹೊರಡುವುದಾದರೆ ಹೊರಡು. ನಾನು ಇಲ್ಲಿಯೇ ಇದ್ದು ಈತನನ್ನು ಉಪಚರಿಸಿ ನೋಡುವೆನು.

ವಿನೋದಿನಿ— ನೋಡಮ್ಮಾ ನೋಡು, ಚೆನ್ನಾಗಿಯೂ ನೋಡು. ನಾನಾದರೋ ಹೋಗುವೆನು

ವಿನೋದಿನಿಯು ಹೊರಟೇ ಹೋದಳು ಆದರೆ ವಿಲಾಸಿನಿಯು, ಗೆಳತಿಯು ಹೊರಟು ಹೋದುದಕ್ಕೆ ಕೊಂಚವಾದರೂ ವ್ಯಸನ ಪಡದೆ, ಭೂತದ ಯಾಪಶ್ಚಾತ್ತಾಪದಿಂದ ಮನಗರಗಿದವಳಾಗಿ ಆ ವ್ಯಕ್ತಿಯ ಬಳಿಗೆ ಬಂದು ಆತನ ಹಣೆಯ ಮೇಲೆ ಕೈಯಿಟ್ಟಳು. ಆ ಕೂಡಲೇ ಆತನು ಕಣ್ದೆರೆದು ದುರ ದುರನೆ ನೋಡಿದನು. ವಿಲಾಸಿನಿಯು ಸಂತಸಗೊಂಡವಳಾಗಿ ಆ ವ್ಯಕ್ತಿಯನ್ನು ಕುರಿತು ಮೃದುಮಧುರಸ್ವರದಿಂದ-ನಿನಗೇನಾಗಿರುವುದು? ಎಂದುಕೇಳಿದಳು.

ವ್ಯಕ್ತಿ—ನನಗೆ ಗೊತ್ತಿಲ್ಲ. ನಾನಾದರೋ ಬಹು ದೂರದೇಶದಿಂದ ನಡೆದು ಬರುತ್ತಿದ್ದೆನು. ಆಹಾರ ವಿಲ್ಲದೆ ನಾನು ಸೊಕ್ಕಿ ಸೊರಗಿದವನಾಗಿ ಬಸವಳಿದು ಬಿದ್ದೆನು ಈಗ ನನಗೆ ವಿಶ್ರಾಂತಿಯುಂಟಾಗಿ ಜ್ಞಾನೋದಯ ವಾಗಿರುವುದು.

ವಿಲಾಸಿನಿ—ನನ್ನಿಂದೇನಾಗಬೇಕು, ತಿಳಿಸು ?

ವ್ಯಕ್ತಿ— ಇಷ್ಟರ ಉಪಕಾರಕ್ಕೆ ನಾನು ಎಷ್ಟೋ ಧನ್ಯನಾಗಿರುವೆನು. ಇನ್ನು ನನ್ನನ್ನು ನಾನು ರಕ್ಷಿಸಿಕೊಳ್ಳಬಲ್ಲೆನು.

"ಮಹಾಶಯ ! ಇನ್ನೂ ಕೊಂಚ ಹೊತ್ತು ಹೀಗೆಯೇ ವಿಶ್ರಮಿಸಿಕೊಳ್ಳು. ನಾನು ಒಂದೆರಡು ನಿಮಿಷಗಳೊಳಗಾಗಿ ಇಲ್ಲಿಗೆ ಬರುವೆನು" ಎಂದು ಹೇಳಿ ವಿಲಾಸಿನಿಯು ಓಡಿಹೋಗಿ ಹಾಲುಮಾರುವ ಮಾಲತಿಯ ಬಳಿಗೆ ಬಂದು—ತಾಯೆ ! ಒಂದು ರೊಟ್ಟಿಯನ್ನೂ ಕೊಂಚ ಹಾಲನ್ನೂ ಕೊಡಬಲ್ಲೆಯಾ ? ಎಂದು ಕೇಳಿದಳು.

ಮಾಲತಿ—ಮಗು ! ನೀನು ತುಂಬಾ ಹಸಿದಿರುವಂತಿದೆ. ಒಳಗೆ ಬಂದು ಕುಳಿತುಕೊಳ್ಳು, ನಿನಗೆ ಹೊಟ್ಟೆ ತುಂಬಾ ಬಡ್ಡಿಸುವೆನು.

ವಿಲಾಸಿನಿ—ನನಗೆ ಹಸಿವಿಲ್ಲ, ತಾಯೆ ! ಬೀದಿಯ ಅಂಚಿನಲ್ಲಿ ಬಿಕಾರಿಯೊಬ್ಬನು ಹೊಟ್ಟೆಗಿಲ್ಲದೆ ಕಂಗೆಟ್ಟು ಸತ್ತವನಂತೆ ಬಿದ್ದಿರುವನು. ಏನನ್ನಾದರೂ ಕೊಟ್ಟು ಆತನನ್ನು ಬದುಕಿಸಬೇಕೆಂದು ನಿನ್ನಲ್ಲಿಗೆ ಬಂದಿರುವೆನು.

ಮಾಲತಿ—(ಆಶ್ಚರ್ಯದಿಂದ) ಏನ ಹೇಳಿದೆ ! ಬಿಕಾರಿಯೊಬ್ಬನು ಹೊಟ್ಟೆಗಿಲ್ಲದೆ ಸಾಯಲಿಕ್ಕೆ ಬಿದ್ದಿರುವನೇ ?

ವಿಲಾಸಿನಿ—ತಡವಾಗುವುದಾದರೆ ಆತನು ಬದುಕುವ ಸಂಭವ ಏರಲಾರದು.

ಮಾಲತಿಯು ಈ ಮಾತನ್ನು ಕೇಳಿದ ಕೂಡಲೆ ಕನಿಕರದಿಂದ ಸಂಕಟಪಟ್ಟವಳಾಗಿ ರೊಟ್ಟಿಯನ್ನೂ, ಹಾಲನ್ನೂ, ನೀರನ್ನೂ ತೆಗೆದುಕೊಂಡು ವಿಲಾಸಿನಿಯೊಡನೆ ಆತನಿದ್ದಲ್ಲಿಗೆ ಬಂದು, ಬಿಕಾರಿಯನ್ನು ಹಿಡಿದೆತ್ತಿ—ಮಗು ! ಏಳು, ನಿನಗಾಗಿ ರೊಟ್ಟಿಯನ್ನೂ, ಹಾಲನ್ನೂ ತಂದಿರುವೆನು. ತಡಮಾಡದೆ ಇದನ್ನು ತೆಗೆದುಕೊಳ್ಳು, ಎಂದಳು.

ವಿಲಾಸಿನಿಯು ಕೊಂಚ ಕೊಂಚವಾಗಿ ಆತನಿಗೆ ಹಾಲನ್ನು ಕುಡಿಸಿ ರೊಟ್ಟಿಯನ್ನು ತಿನ್ನುವುದಕ್ಕೆ ಕೊಟ್ಟಳು. ಹೊಟ್ಟೆಗೆ ಆಹಾರವು ಬಿದ್ದಕೂಡಲೆ, ಆತನು ಕ್ರಮಕ್ರಮವಾಗಿ ಚೇತರಿಸಿಕೊಳ್ಳಲಾರಂಭಿಸಿದನು. ಮಾಲತಿಯು ಆತನ ಕೈಗಳನ್ನು ಹಿಡಿದುಕೊಂಡು—ಮಗು ! ನೀನು ತುಂಬಾ ಬಳಲಿರುವೆ. ನಿನ್ನನ್ನು ನಾನು ಈಗ ನಮ್ಮ ಮನೆಗೆ ಕರೆದುಕೊಂಡು ಹೋಗಿ ಹಾಸುಗೆಯ ಮೇಲೆ ಮಲಗಿಸುವೆನು. ಒಂದೆರಡು ಗಂಟೆಗಳೊಳಗಾಗಿ ನಿನ್ನ ಆಯಾಸವೆಲ್ಲವೂ ದೂರವಾಗುವುದು. ನೀನು ಬೆಳಗಾದ ಕೂಡಲೆ ಎಲ್ಲಿಗಾದರೂ ತೆರಳಬಹುದು, ಎಂದು ನುಡಿದಳು.

ವ್ಯಕ್ತಿ—ತಾಯೆ ! ನಿನ್ನ ಆತಿಥ್ಯಕ್ಕೆ ನಾನು ಎಷ್ಟೋ ಕೃತಜ್ಞನಾಗಿ

ರುವೆನು. ನನ್ನ ದೇಹದಲ್ಲಿ ನನಗೆ ಇನ್ನು ಬಳಲಿಕೆ ಇಲ್ಲ. ಚೆದರಿ ಹೋಗಿದ್ದ ಶಕ್ತಿಯು ನನ್ನಲ್ಲಿ ಕೂಡಿಕೊಂಡು ಬಂದಿರುವುದು. ಇನ್ನು ನಾನು ಮುಂದಕ್ಕೆ ತೆರಳುವೆನು. ತಾಯೆ ! ನಿನ್ನ ಹೆಸರೇನು ? ನಿನ್ನ ಉಪಕಾರಕ್ಕೆ ನಾನು ಎಂದಾದರೊಂದು ದಿನ ಪ್ರತ್ಯುಪಕಾರ ಮಾಡಬೇಕೆಂದು ಚಿಂತಿಸಿರುವೆನು.

ಮಾಲತಿ—ಮಗು ! ನಾನು ಮಾಡಿದ ಉಪಕಾರವು ಅಷ್ಟರಲ್ಲಿಯೇ ಇರುವುದು. ಪ್ರತ್ಯುಪಕಾರವನ್ನು ಬಯಸಲು ನಾನು ಇಲ್ಲಿಗೆ ಬಂದವಳಲ್ಲ. ನಿನಗಿನ್ನೂ ದೇಹದಲ್ಲಿ ತ್ರಾಣವಿಲ್ಲ ; ನಡೆ, ನಮ್ಮ ಮನೆಯಲ್ಲಿ ಬೆಳಗಾಗುವವರೆಗೂ ಮಲಗಿದ್ದು ಮುಂದಕ್ಕೆ ತೆರಳುವಂತೆ.

ವ್ಯಕ್ತಿ—ತಾಯೆ ! ಇದಕ್ಕಿಂತಲೂ ಹೆಚ್ಚಿನ ಉಪಚಾರವು ನನಗೆ ಬೇಕಿಲ್ಲ. ನೀವು ಇಷ್ಟು ಮಾಡಿರುವುದೇ ಅನಂತವಾಗಿರುವುದು. ನನ್ನನ್ನು ನೀವುಗಳು ಬಲಾತ್ಕಾರಪಡಿಸಲಾಗದು. ನಾನು ಬೇಗನೆ ರಾಜನಗರಕ್ಕೆ ಹೋಗತಕ್ಕವನಾಗಿರುವೆನು.

(ಹುಡುಗಿಯನ್ನು ನೋಡಿ) ಎಲೌ ಯುವತಿ ! ನಿನ್ನ ಪ್ರಯತ್ನದ ಬಲದಿಂದ ನಾನು ಇಂದು ಬದುಕಿದೆನು, ಇಲ್ಲವಾದರೆ ನಾನು ಇಷ್ಟು ಹೊತ್ತಿಗೆ ಬೀದಿಯ ಹೆಣವಾಗಿಬಿಡುತ್ತಿದ್ದೆನು.

ಅಪರಿಚಿತನು, ಹೀಗೆ ಮಾತನಾಡಿದ ಬಳಿಕ ಯುವತಿಯನ್ನು ಬಲು ಹೊತ್ತು ಎವೆಯಿಕ್ಕದೆ ನೋಡಿದನು. ಯುವತಿಯು ನಾಚುಗೆಯಿಂದ ತಲೆವಾಗಿದವಳಾಗಿ ಆವ ಮಾತನ್ನೂ ಆಡದೆ ಒಂದೆಡೆಯಲ್ಲಿ ನಿಂತುಬಿಟ್ಟಳು.

ಮಾಲತಿ—ಮಗು ! ನಿನಗಿನ್ನೂ ಸರಿಯಾದ ಶಕ್ತಿ ಬಂದಿಲ್ಲ. ನಿನ್ನ ಶರೀರದಲ್ಲಿ ಇನ್ನೂ ರೋಗವಿರುವಂತೆ ತೋರುತ್ತಿರುವುದು. ನೀನು ನಮ್ಮ ಮಾತನ್ನು ತೆಗೆದು ಹಾಕಿ ಹೋಗುವುದು ತರವಲ್ಲ. ನಡೆ, ನಮ್ಮ ಮನೆಗೆ ಹೋಗುವ.

ವ್ಯಕ್ತಿ— ತಾಯೆ ! ನನ್ನ ದೇಹದಲ್ಲಿ ನಿರಾಹಾರದ ಬಳಲಿಕೆಯೇ ಹೊರತು ಮತ್ತಾವ ರೋಗವೂ ಇಲ್ಲ. ನಾನು ಮುಂದಕ್ಕೆ ತೆರಳುವೆನು. ನನ್ನನ್ನು ಅಡ್ಡಗಿಸಬೇಡಿರಿ.

ಮಾಲತಿ—(ಸಂಶಯಪಟ್ಟವಳಾಗಿ) ಮಗು ! ಮನೆಯಿಂದೇನಾದರೂ ತಪ್ಪಿಸಿಕೊಂಡು ಹೊರಟು ಬಂದಿರುವೆಯಾ ಏನು ?

ವ್ಯಕ್ತಿ—ಇಲ್ಲ, ತಾಯೆ !

ಮಾಲತಿ—ತಪ್ಪುಕೆಲಸ ಮಾಡಿ ಆರಿಗೂ ಸಿಕ್ಕಬಾರದೆಂದು ನೀನು ಓಡಿಹೋಗುವಂತಿದೆ.

ವ್ಯಕ್ತಿ—ಇಲ್ಲ, ತಾಯಿ! ನಾನು ಆವ ತಪ್ಪನ್ನೂ ಮಾಡಿದವನಲ್ಲ, ಆರೂ ನನ್ನನ್ನು ಅನುಸರಿಸಿಕೊಂಡು ಬರುತ್ತಿಲ್ಲ.

(ಮುಗುಳುನಗೆಯಿಂದ ಯುವತಿಯನ್ನು ನೋಡಿ) ಎಲೌ, ನಿನ್ನ ಹೆಸರೇನು? ನೀನು ನನಗೆ ಪ್ರಾಣದಾನ ಮಾಡಿರುವೆ. ಈಗಲ್ಲದಿದ್ದರೂ ಎಂದಾದರೊಂದು ದಿನ ನಿನ್ನ ಕೆಲಸಕ್ಕೆ ಪ್ರತಿಫಲವನ್ನುಂಟುಮಾಡಬೇಕೆಂದಿರುವೆನು.

ಯುವತಿಯು ಒಂದು ಮಾತನ್ನೂ ಆಡಲಿಲ್ಲ.

ವ್ಯಕ್ತಿ—ಕೇಳು, ನನ್ನ ಹೆಸರು ರಂಗರಾಜ. ನಿನ್ನ ಹೆಸರನ್ನು ಹೇಳುವುದಕ್ಕೆ ಅಂಜುವುದೇಕೆ? ನಿನ್ನ ಹೆಸರು ನನಗೆ ಗೊತ್ತಿದ್ದರೆ, ಮುಂದೆ ಎಂದಾದರೊಂದು ದಿನ, ನೀನು ಈಗ ಮಾಡಿದ ಪ್ರಾಣದಾನದ ಫಲವನ್ನು ನಿನಗೆ ತಿಳಿಸಿ ನಿನ್ನ ಮನವನ್ನು ಸಂತೋಷಗೊಳಿಸಬಹುದು. ಎಲೌ ಪ್ರಾಣರಕ್ಷಿಣಿ! ನೀನು ಮಾಡಿದುದು ಸಾರ್ಥಕವಾಯಿತೋ ಇಲ್ಲವೋ ಎಂಬುದನ್ನು ತಿಳಿಯಬೇಕಾದುದು ನಿನ್ನ ಕರ್ತವ್ಯವೇ ಆಗಿರುವುದು. ಅದುಕಾರಣವೇ ನಾನು ನಿನ್ನ ಹೆಸರನ್ನು ಕೇಳಿದುದು. ಹೆಸರನ್ನು ಹೇಳುವುದರಿಂದ ದೋಷವೇನಿರುವುದು?

ಮಾಲತಿ—(ವಿಲಾಸಿನಿಯನ್ನು ನೋಡಿ) ಮಗು! ಆತನು ಹೇಳುವುದು ಯುಕ್ತವಾಗಿರುವುದು. ಹೆಸರನ್ನು ಹೇಳುವುದರಿಂದ ದೋಷ ತಾನೇ ಏನು?

ಯುವತಿಯು ಮೊದಲಿನಂತೆಯೇ ಸುಮ್ಮನೇ ಇದ್ದುದನ್ನು ನೋಡಿ, ಮಾಲತಿಯು ಆತನ ಪ್ರಶ್ನೆಗೆ ಉತ್ತರವಾಗಿ—ಮಹಾಶಯ! ವಿಲಾಸಿನಿಯೆಂದು ಈಕೆಯ ಹೆಸರು. ಈಕೆಯಲ್ಲಿ ಮಹಾ ಪುರುಷ ಲಕ್ಷಣಗಳಿರುವುವು. ಭೂತದಯಾಪಶ್ಚಾತ್ತಾಪವೂ ಪರದುಃಖದುಃಖಿತತ್ವವೂ ಈಕೆಯ ಅನೇಕ ಗುಣಗಳಲ್ಲಿ ಸಾಮಾನ್ಯವಾದುವು. ಮಗು! ನಡೆ, ನಮ್ಮ ಮನೆಗೆ ಹೋಗುವ, ಎಂದಳು.

ರಂಗರಾಜ—ತಾಯಿ! ನಿಮ್ಮ ಉಪಚಾರೋಕ್ತಿಗಳಿಗೆ ನಾನು ಚಿರಕಾಲದ ಋಣಿಯಾಗಿರುವೆನು. ನನಗೆ ಈಗ ಆವ ಬಾಧೆಯೂ ಇಲ್ಲ—ಎಂದ ಮೇಲೆ, ನಾನು ವ್ಯರ್ಥವಾಗಿ ಈ ರಾತ್ರಿಯನ್ನು ಇಲ್ಲಿ ಏಕೆ ಕಳೆಯಬೇಕು? ನನಗೆ ಮುಂದಕ್ಕೆ ತೆರಳುವುದಕ್ಕೆ ಅಪ್ಪಣೆಕೊಡೋಣವಾಗಲಿ.

ಮಾಲತಿ—ನಾಳೆಯ ಭೋಜನಕ್ಕೆ ಏನ ಮಾಡುವೆ ?

ರಂಗರಾಜ—ನಾನು ರಾಜನಗರಕ್ಕೆ ಹೋಗಿ ಮುಂದಣ ಭೋಜನವನ್ನು ಸಂಪಾದಿಸಿಕೊಳ್ಳಬೇಕಾಗಿದೆ.

ಮಾಲತಿ—ಕೈಯಲ್ಲಿ ಹಣಕಾಸುಗಳೇನೂ ಇಲ್ಲವೇ, ಮಹಾಶಯ ?

ರಂಗರಾಜ—ಸದ್ಯದಲ್ಲಿ ನನ್ನ ಹತ್ತಿರ ಒಂದು ಕಾಸು ಇಲ್ಲದಿದ್ದರೂ, ಮುಂದೆ ಅದನ್ನು ಸಂಪಾದಿಸಿ ಮೊದಲು ನಿಮ್ಮ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವೆನು.

ಮಾಲತಿ—ರಂಗರಾಜ ! ನಿನ್ನ ಉದಾತ್ತಸ್ವಭಾವವನ್ನು ನೋಡಿದರೆ, ನೀನು ಮಹಾಪುರುಷನಾಗಿ ಬಾಳುವೆ. ಮಹಾಪುರುಷರು ಹಠ ಹಿಡಿಯಬಾರದು ಇಂದು ನಮ್ಮ ಮನೆಯಲ್ಲಿ ಬಂದಿರು.

ರಂಗರಾಜ—ನೀವು ನನ್ನನ್ನು ನಿರ್ಬಂಧಿಸಬಾರದು.

ಮಾಲತಿ—ರಾತ್ರಿಯಾಯಿತು. ರಾತ್ರಿಯಲ್ಲಿ ಪ್ರಯಾಣವು ಅಪಾಯಕರವು.

ರಂಗರಾಜ—ಬೀದಿಯ ಬಿಕಾರಿಗೆ ಹಗಲೇನು, ರಾತ್ರಿಯೇನು ? ಅದೃಷ್ಟವು ಕಡಮೆಯಾದರೆ ಅಪಾಯವು ಎಲ್ಲಿಲ್ಲ ?

ಮಾಲತಿ—ರಂಗರಾಜ ! ಆ ನಗರದಲ್ಲಿ ಆರನ್ನು ನಿರೀಕ್ಷಿಸಿಕೊಂಡು ತೆರಳಿರುವೆ ?

ರಂಗರಾಜ—ಹಣದ ಸಂಪಾದನೆಯಾಗುವುದೆಂಬ ನಿರೀಕ್ಷಣೆಯಿಂದ ತೆರಳಿರುವೆನು.

ಮಾಲತಿ—ಇದೇ ಮುಖ್ಯ ಉದ್ದೇಶವೇ ?

ರಂಗ—ಇದೇ ಮುಖ್ಯ ಉದ್ದೇಶವು. ಹುಟ್ಟುದರಿದ್ರನಿಗೆ ಹಣಕ್ಕಿಂತಲೂ ಮಿಗಿಲಾದುದೇನಿರುವುದು ?

ಮಾಲತಿ—ನಿನ್ನ ತಂದೆತಾಯಿಗಳೆಲ್ಲಿರುವರು ?

ರಂಗ—ಪರಲೋಕದಲ್ಲಿ.

ಮಾಲತಿ—ಹಾಗಾದರೆ ನೀನು ಅನಾಥ.

ರಂಗ—ಅಹುದು, ತಾಯೆ ! ನಾನು ಅನಾಥಬಾಲಕ.

ಮಾಲತಿ—ಮಹಾಶಯ ! ನೀನು ಕೆಲಸಮಾಡಿ ಹಣ ಸಂಪಾದಿಸುವುದಕ್ಕಾಗಿ ಅಲ್ಲಿಗೆ ತೆರಳಿರುವೆಯಲ್ಲವೇ ?

ರಂಗೆ—ಅದಕ್ಕಾಗಿಯೇ ತೆರಳಿರುವೆನು.

ಮಾಲತಿ—ಹಾಗಾದರೆ, ನಮ್ಮ ಯಜಮಾನರು ಕೆಲಸಕ್ಕಾಗಿ ಬಲಾಢ್ಯರಾದ ಹುಡುಗರನ್ನು ನಿಯಮಿಸಿಕೊಳ್ಳಬೇಕೆಂದಿರುವರು. ನೀನು ಒಪ್ಪುವುದಾದರೆ, ನಿನಗೂ ಕೆಲಸವು ದೊರೆಯುವುದು. ನಡೆ, ಹೋಗುವ.

ರಂಗೆ—ತಾಯೆ! ಹಳ್ಳಿಯ ಕೆಲಸಗಳಿಂದ ನನಗೆ ತುಂಬಾ ಬೇಸರವುಂಟಾಗಿ ಹೋಗಿರುವುದು. ಹಳ್ಳಿಯ ಕೆಲಸಕ್ಕೆ ಮತ್ತೆ ಮನವೊಡಂಬಡದು. ದೊಡ್ಡದೊಡ್ಡ ಪಟ್ಟಣಗಳಲ್ಲಿ ಬಗೆಬಗೆಯ ಕೆಲಸಗಳು ದೊರೆಯುವುವು. ಅಲ್ಲಿ ಒಂದಲ್ಲದಿದ್ದರೆ ಮತ್ತೊಂದು ಕೆಲಸವನ್ನು ಮಾಡಿ ಹಣವನ್ನು ಸಂಪಾದಿಸಬಹುದು.

(ವಿಲಾಸಿನಿಯ ಕಡೆಗೆ ನೋಡಿ) ಎಲೌ ನಾರೀಮಣಿ? ನಿನ್ನ ಮಂಗಳಕರವಾದ ಮುಖಕಮಲವನ್ನು ನಾನೆಂದಿಗೂ ಮರೆಯೆನು. ನಿನ್ನ ಉಪಕಾರವಂತೂ ಚಿರಸ್ಮರಣೀಯವಾದುದೆಂದು ಹೇಳಬೇಕಾದುದೇನೂ ಇರುವುದಿಲ್ಲ. ನಾನು ಬೀದಿಯ ಬಿಕಾರಿಯಾದುದರಿಂದ ನನ್ನನ್ನು ಜ್ಞಾಪಿಸಿಕೊಳ್ಳುತ್ತಿರಬೇಕೆಂದು ನಾನು ಕೇಳುವುದಿಲ್ಲವಾದರೂ, ನಾನು ಮಟ್ಟಿಗೆ ನಿನ್ನನ್ನು ಎಂದಿಗೂ ಮರೆಯುವಂತಿಲ್ಲ. ಈಗಾಗಲೇ ತುಂಬಾ ಹೊತ್ತಾಗಿಹೋಗಿರುವುದು. ನಾನು ಹೋಗಿ ಬರುವೆನು, ವಿಶ್ವಾಸವು ಏಕರೀತಿಯಾಗಿರಲಿ

ಮಾಲತಿ—ಹೊರಡುವುದೇ ನಿಶ್ಚಯವಾದರೆ, ಈ ರೊಟ್ಟಿಯನ್ನಾದರೂ ತೆಗೆದುಕೊಂಡು ಹೊರಡು.

ರಂಗರಾಜ—ತಾಯೆ! ನಿನ್ನ ಇಷ್ಟವಿದ್ದಂತಾಗಲಿ. ಈಗ ನಾನು ಇದನ್ನು ನಿನ್ನಿಂದ ಸಾಲವಾಗಿ ತೆಗೆದುಕೊಳ್ಳುವೆನು ಇದರ ಬೆಲೆಯನ್ನು ಎಂದಾದರೊಂದು ದಿನ ನಿನಗೆ ಸಲ್ಲಿಸಿ ಋಣದಿಂದ ಮುಕ್ತನಾಗುವೆನು. ಇದಕ್ಕೆ ನೀನು ಸಮ್ಮತಿಸುವುದಾದರೆ, ನಾನು ತೆಗೆದುಕೊಳ್ಳುವೆನು.

ಮಾಲತಿ— (ನಕ್ಕು) ಮಗು! ಋಣದಿಂದ ಮುಕ್ತನಾಗುವುದೇ ಧರ್ಮವು ಋಣವಿಮೋಚನೆಯಿಲ್ಲದೆ ಶ್ರೇಯೋಮಾರ್ಗವು ಲಭಿಸದು.

ರಂಗರಾಜ—ಅಪ್ಪಣೆಕೊಡುವುದಾದರೆ ನಾನು ಮುಂದಕ್ಕೆ ತೆರಳುವೆನು.

ರಂಗರಾಜನು ಹೀಗೆ ಹೇಳಿ ಹೊರಟನು. ಮಾಲತಿಯು ಮತ್ತೆ ಅಡ್ಡಿ ಮಾಡಲಿಲ್ಲ, ವಿಲಾಸಿನಿಯ ಬಾಯಿಂದ ಆವ ಮಾತೂ ಹೊರಡಲಿಲ್ಲ.

ರಂಗರಾಜನು ಹೊರಟುಹೋದ ಬಳಿಕ, ಮಾಲತಿಯು ವಿಲಾಸಿನಿಯನ್ನು

ಕುರಿತು—ಮಗು ! ರಂಗರಾಜನು ಸ್ವಭಾವವಾಗಿಯೂ ಮಹಾಪುರುಷನು. ಈತನು ಎಂದಾದರೊಂದು ದಿನ ಲೋಕದಲ್ಲಿ ಅದ್ಭುತವಾದ ಕಾರ್ಯಗಳನ್ನು ಮಾಡಿ ಖ್ಯಾತಿಯನ್ನು ಪಡೆದುಕೊಂಡು ಮಹಾಪುರುಷನಾಗಿ ಬಾಳುವನು. ಇವನೆಂದಿಗೂ ಬೀದಿಯ ಬಿಕಾರಿಯಲ್ಲ. ಇದರಲ್ಲಿ ಏನೋ ಮರ್ಮವಿರಬೇಕು. ವಿಲಾಸ ! ನೋಡಿದೆಯಾ, ಆತನ ನಡೆನುಡಿಗಳೂ ಮಾನಮರ್ಯಾದೆಗಳೂ ಎಷ್ಟು ಹೃದಯಂಗಮಗಳಾಗಿದ್ದುವು. ನಿಜವಾಗಿಯೂ ಆತನು ಮನುಷ್ಯ ರೂಪದಲ್ಲಿನ ದೇವತೆಯೇ ಹೊರತು ಬೇರೆಯಲ್ಲ. ಈತನು ಲೋಕದಲ್ಲಿ ನರೋತ್ತಮನಾಗಿ ಬಾಳಿಯಾನು. ಈ ಮಾತನ್ನು ನೀನು ಜ್ಞಾಪಕದಲ್ಲಿಟ್ಟಿರು, ಎಂದು ನುಡಿದಳು.

ಬಳಿಕ ಕತ್ತಲೆಯು ಕವಿಯುತ್ತ ಬರಲು, ವಿಲಾಸಿನಿಯು ಮಾಲತಿಯನ್ನು ಜತೆಯಲ್ಲಿಯೇ ಕರೆದುಕೊಂಡು ತನ್ನ ಪಾಠಶಾಲೆಗೆ ಬಂದಳು. ಹೊತ್ತು ಮೀರಿ ಬಂದುದಕ್ಕಾಗಿ ಪಂಡಿತ ಕಾತ್ಯಾಯನಿಯು ವಿಲಾಸಿನಿಗೆ ತಕ್ಕರೀತಿಯಲ್ಲಿ ಬುದ್ಧಿಗಲಿಸಿ ವಿನೋದಿನಿಯ ಬಳಿಗೆ ಕಳುಹಿದಳು. ವಿನೋದಿನಿಗೂ ವಿಲಾಸಿನಿಗೂ ಮಾತು ಕತೆಗಳು ನಡೆದುವು. ಅದರ ಪರಿಪಾಟಿಯು ಈರೀತಿಯಾಗಿದ್ದಿತು.

ವಿನೋದಿನಿ—ವಿಲಾಸ ! ನನಗೆಲ್ಲವೂ ಗೊತ್ತು. ನಮ್ಮ ಕಾತ್ಯಾಯನೀದೇವಿಯವರು ನಿನ್ನ ವಿಷಯವೆಲ್ಲವನ್ನೂ ನಿನ್ನ ತಂದೆಗೆ ಪತ್ರದ ಮೂಲಕವಾಗಿ ತಿಳಿಸುವವರಾಗಿರುವರು.

ವಿಲಾಸಿನಿ—ವಿನೋದ ! ನಾನೇನೂ ತಪ್ಪು ಮಾಡಿಲ್ಲ. ಅವರು ತಿಳಿಸುವುದರಿಂದ ನನಗಾಗುವುದೇನು ?

ವಿನೋದಿನಿ—ಅದು ಹಾಗಿರಲಿ. ಆ ಬಿಕಾರಿಯ ವಿಷಯವೇನು? ಅವನು ಬದುಕಿದನೋ, ಸತ್ತನೋ ?

ವಿಲಾಸಿನಿ—ಆ ಯುವಕನು ಬದುಕಿಕೊಂಡನು.

ವಿನೋದಿನಿ—ಯುವಕ ? ಆಹಾ, ಆ ಬಿಕಾರಿಯು ಯುವಕ !

ವಿಲಾಸಿನಿ—ಆತನು ಬಿಕಾರಿಯಲ್ಲ.

ವಿನೋದಿನಿ—ಆತನು ಬಿಕಾರಿಯಲ್ಲವೇ ?

ವಿಲಾಸಿನಿ—ಅಲ್ಲ.

ವಿನೋದಿನಿ—ನಿನಗೆ ಹೇಗೆ ಗೊತ್ತು?

ವಿಲಾಸಿನಿ—ನನಗೆ ಗೊತ್ತು.

ವಿನೋದಿನಿ—ಓಹೋ! ಆತನು ಆಗಲೇ ನಿನ್ನ ಮನವನ್ನು ಅಪಹರಿಸಿದಂತಿದೆ.

ವಿಲಾಸಿನಿ—ವಿನೋದ! ನಿನ್ನ ಅಭಿಪ್ರಾಯವು ತಪ್ಪಾದುದು. ಆತನು ಎಂದಿಗೂ ಬಿಕಾರಿಯಲ್ಲ, ಆತನು ಉದಾತ್ತ ಸ್ವಭಾವದವನಾದರೂ ಅದೃಷ್ಟ ಹೀನನಾದ ಯುವಕನು.

ವಿನೋದಿನಿ—ಇದೇನು ನಾಚುಗೆ ಕೇಡು! ನೀನು ನಿಜವಾಗಿಯೂ ಆತನ ಪ್ರೇಮಪಾಶಕ್ಕೆ ಸಿಕ್ಕಿಬಿದ್ದಂತಿದೆ. ಬೀದಿಯ ಬಿಕಾರಿಯಲ್ಲಿಯೋ ನಿನ್ನ ಪ್ರೇಮಾವಿರ್ಭಾವವು?

ವಿಲಾಸಿನಿ—ವಿನೋದ! ಇದೇನು ಹೊಟ್ಟೆಯುರಿಸುವೆ?

ವಿನೋದಿನಿ—ನಾನೇ ಹೊಟ್ಟೆಯುರಿಸುವವಳು?

ವಿಲಾಸಿನಿ—ನೀನೇ.

ವಿನೋದಿನಿ—ಚೆನ್ನಾಗಿದೆ, ಚೆನ್ನಾಗಿದೆ. ಬೀದಿಯ ಬಿಕಾರಿಗಳನ್ನು ಹುಡುಕಿಕೊಂಡು ಹೋಗಿ ಅವರನ್ನು ಯುವಕರೆಂದೂ ಉದಾತ್ತಸ್ವಭಾವದವರೆಂದೂ ಕರೆವುದು ನಿನ್ನ ಯೋಗ್ಯತೆಗೆ ಸರಿಯಾಗಿರುವುದು. ನಮ್ಮ ದೇವಿಯವರು ಈ ವಿಷಯವನ್ನು ನಿನ್ನ ತಂದೆಗೆ ತಿಳಿಸದೇ ಇರರು.

ವಿಲಾಸಿನಿ—ಆತನು ಮಹಾಪುರುಷನೆಂದು ನಮ್ಮ ಹಾಲಿನ ಮಾಲತಿಯೇ ಹೇಳಿದುದು. ಬೇಕಾದರೆ ಅವಳನ್ನೇ ಕೇಳಿ ಸಂಶಯವನ್ನು ಹೋಗಲಾಡಿಸಿಕೊಳ್ಳು.

ವಿನೋದಿನಿ—ಆತನು ಹೆಂಡಕುಡಕನಲ್ಲವೇ?

ವಿಲಾಸಿನಿ—ಶಿವಶಿವ! ಆತನು ಹೊಟ್ಟೆಗಿಲ್ಲದೆಯೇ ಜ್ಞಾನತಪ್ಪಿ ಬಿದ್ದಿದ್ದನು.

ವಿನೋದಿನಿ—(ನಗುತ್ತಾ) ಹಾಗಾದರೆ ಅವನು ಮನೆಯಿಂದ ಕದ್ದೋಡಿಬಂದ ಬಿಕಾರಿಯಾಗಿರಬೇಕು.

ವಿಲಾಸಿನಿ—ಆತನು ಹಾಗೆಂದಿಗೂ ಅಲ್ಲ.

ವಿನೋದಿನಿ—ಈಗ ಗೊತ್ತಾಯಿತು. ಆತನು ನಿನ್ನನ್ನು ಮರುಳು ಮಾಡಿ ಬಿಟ್ಟಿರುವನು.

ವಿಲಾಸಿನಿ— ಗುಣವಂತನನ್ನು ಗುಣವಂತನೆಂದು ಕರೆವುದರಿಂದ

ದೋಷವೆಂಥದೋ ನನಗೆ ತಿಳಿಯದು. ಆತನು ಬಡವನಾಗಿದ್ದುದರಿಂದ ಹಣವನ್ನು ಸಂಪಾದಿಸುವುದಕ್ಕಾಗಿ ತೆರಳಿದ್ದನು.

ವಿನೋದಿನಿ—ಅವನಿಗೆ ಹಣವಾವುದು, ಗುಣವಾವುದು? ಅವನು ಇಲ್ಲಿಯೇ ಇದ್ದು ನಿನ್ನನ್ನು ಅಪಹರಿಸಿಕೊಂಡು ಹೋಗುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿರುವನು. ನಾಳೆಯ ದಿನ ಅವನೇನಾದರೂ ನನ್ನ ಕಣ್ಣಿಗೆ ಬೀಳುವುದಾದರೆ, ಈ ದುರಾಚಾರವನ್ನು ನಿನ್ನ ತಂದೆಗೆ ತಪ್ಪದೆಯೇ ತಿಳಿಸಿಬಿಡುವೆನು.

ವಿಲಾಸಿನಿ—ಅವನು ಇಲ್ಲಿರುವುದಿಲ್ಲ.

ವಿನೋದಿನಿ—ಅವನು ಇಲ್ಲಿಯೇ ಇರುವನೆಂದು ನಾನು ಪ್ರಮಾಣ ಮಾಡಿ ಹೇಳುವೆನು.

ವಿಲಾಸಿನಿ—ಆತನು ರಾಜನಗರದ ದಾರಿಯನ್ನು ಹಿಡಿದು ಎಷ್ಟೋ ಹೊತ್ತಾಯಿತು.

ವಿನೋದಿನಿ—ಹೀಗಾದುದೇ! ಆತನು ತನ್ನ ಮುಂದಣ ಕಾರ್ಯಕ್ರಮಗಳನ್ನು ನಿನಗೆ ಚೆನ್ನಾಗಿಯೂ ತಿಳಿಸಿ ಹೋಗಿರಬೇಕು.

ವಿಲಾಸಿನಿ—ವಿನೋದ! ಬಾಯಿಗೆ ಬಂದ ಹಾಗೆ ಹರಟಬೇಡ. ನಾನು ಆತನೊಡನೆ ಒಂದು ಮಾತನ್ನೂ ಆಡಿದವಳಲ್ಲ. ಮಾಲತಿಯು ಆತನನ್ನು ಕುರಿತು "ಈ ರಾತ್ರಿಯಾದರೂ ಇಲ್ಲಿದ್ದು ವಿಶ್ರಮಿಸಿಕೊಂಡು ಬೆಳಗಾದ ಮೇಲೆ ಹೊರಡು" ಎಂದು ಎಷ್ಟು ಬಗೆಯಲ್ಲಿ ಕೇಳಿಕೊಂಡರೂ ಆತನು ಅದಕ್ಕೆ ಒಪ್ಪದೆ, ಬದುಕುವುದಕ್ಕಾಗಿ ತಾನು ರಾಜನಗರಕ್ಕೆ ಹೋಗಲೇಬೇಕೆಂದು ಹೇಳಿ ಹೊರಟುಹೋದನು.

ವಿನೋದಿನಿ—ಪಿಶಾಚ! ಹೀಗೆಲ್ಲಾ ನೀನು ವರ್ತಿಸುವುದಾದರೆ, ನಿನಗೆ ಗೌರವವು ಉಳಿಯಲಾರದು.

ವಿಲಾಸಿನಿ—ಪ್ರಾಣಿಸಾಮಾನ್ಯಕ್ಕೂ ದಯೆಯನ್ನು ತೋರಿಸಬೇಕಾದುದು ಮನುಷ್ಯನ ಧರ್ಮವು. ನಾನು ಇದಕ್ಕೆ ವಿರೋಧವಾಗಿ ಎಂದೂ ನಡೆದವಳಲ್ಲ.

ವಿನೋದಿನಿ—ಹಾಗಾದರೆ ನಿನ್ನ ಕೃತ್ಯಕ್ಕೆ ನೀನು ಎಂದಾದರೊಂದು ದಿನ ಪ್ರತಿಫಲವನ್ನು ಹೊಂದಿಯೇ ಹೊಂದುವೆ.

ವಿನೋದಿನಿಯು ಆವುದೋ ದುರಭಿಪ್ರಾಯವನ್ನಿಟ್ಟುಕೊಂಡು ಈ ಮಾತನ್ನಾಡಿದಳು. ಮನುಷ್ಯನ ಆಲೋಚನೆ ಒಂದುಬಗೆಯಾದರೆ, ದೈವದ ಆಲೋ

ಚನೆಯೇ ಬೇರೊಂದು ಬಗೆಯಾಗಿರುವುದು. ಇದನ್ನು ಉದಾರ ಹೃದಯ ವಿಲ್ಲದವರು ಹೇಗೆ ತಾನೇ ಅರಿಯಬಲ್ಲರು ?

ವಿನೋದಿನೀ ವಿಲಾಸಿನಿಯರು ಒಂದೆಡೆಯಲ್ಲಿ ಒಡನಾಡಿಕೊಂಡಿದ್ದ ಮಾತ್ರಕ್ಕೆ ಅವರವರ ಸ್ವಭಾವಗಳೂ ಒಂದೇ ತೆರನಾಗಿರುವುದೆಂದರೇನು ? ಆರಾರ ಕರ್ಮವು ಹೇಗೇಗಿರುವುದೋ ಅದಕ್ಕೆ ಅನುಗುಣವಾಗಿಯೇ ಫಲವೂ ಲಭಿಸುವುದು.

---

# ಎರಡನೆಯ ಅಧ್ಯಾಯ.

ವಿಲಕ್ಷಣ ಜೀವನ ವೃತ್ತಾಂತ  ಸ ಕುಮಾರನಾದ ಕುಮಾರನ ಪಾಲನ ಕ್ರಮ. ವೃತ್ತಿಯ ಪ್ರತಿಪಾಲನ ವಿ ಕ ಣ ಮರಣಾವಸಾನ. ಗುಟ್ಟಿನ ಸಂಭಾಷಣ. ಗುಟ್ಟಿನ ಪೆಟ್ಟಿಗೆ ವ್ಯ ಡೇವ! ವಿಭಾ ವ.

ರಂಗರಾಜನು ರಾಜನಗರಕ್ಕೆ ಬಿರಬಿದ ಮೇಲೆ ಅವನಿಗೆ ಏನಾದುದೆಂಬುದನ್ನು ತಿಳಿಸುವುದಕ್ಕೆ ಮೊದಲು ಆತನ ಪೂರ್ವವೃತ್ತಾಂತವನ್ನು ಕೊಂಚ ಮಟ್ಟಿಗಾದರೂ ತಿಳಿಸುವುದು ನಮ್ಮ ಕರ್ತವ್ಯವೇ ಆಗಿರುವುದು. ಪೂರ್ವ ಕಥೆಯನ್ನು ಅರಿಯದೆಯೇ ಉತ್ತರ ಕಥೆಯಲ್ಲಿ ಆರಿಗೂ ಅಭಿರುಚಿಯುಂಟಾಗುವುದಿಲ್ಲವಾದುದರಿಂದ, ಪೂರ್ವಕಥೆ ಏನೆಂಬುದನ್ನು ತಿಳಿದಮಟ್ಟಿಗೆ ನಮ್ಮ ಪ್ರಿಯಪಾಠಕ ಮಹಾಶಯರಲ್ಲಿ ತಿಳಿಯಪಡಿಸಿಕೊಳ್ಳುವೆವು.

ಪ್ರಥಮಾಧ್ಯಾಯದಲ್ಲಿ ನಡೆದ ಘಟನಾವಿಶೇಷವು ಸಂಭವಿಸುವುದಕ್ಕೆ ಪ್ರಾಯಿಕವಾಗಿ ಹದಿನೈದು ವರ್ಷಗಳಿಗೆ ಮೊದಲು ಮಧ್ಯವಯಸ್ಕನಾದ ಮನುಷ್ಯನೊಬ್ಬನು ರಾಜನಗರಕ್ಕೆ ಎಂಬತ್ತು ಮೈಲಿಗಳ ದೂರದಲ್ಲಿದ್ದ ಕಾಮಿಲಾಪುರದ ಅದೊಂದು ಅಭುಕ್ತ ಪ್ರದೇಶದಲ್ಲಿ ಪತನೋನ್ಮುಖವಾಗಿದ್ದ ಹರಕುಮನೆಯೊಂದನ್ನು ಸುಲಭದ ಬೆಲೆಗೆ ಕೊಂಡುಕೊಂಡು, ಅದರಲ್ಲಿ ಎರಡು ವರ್ಷದ ಹುಡುಗನೊಬ್ಬನನ್ನು ಇಟ್ಟುಕೊಂಡು ವಾಸಮಾಡ ತೊಡಗಿದನು. ಆತನು ವಿಶೇಷವಾಗಿ ಆರ ಪರಿಚಯವನ್ನೂ ಬಯಸದೆ ಏಕಾಂತವಾಗಿರಲಾರಂಭಿಸಿದನು. ಆರಾದರೂ ಬಂದು ಪೂರ್ವೋತ್ತರವನ್ನು ವಿಚಾರಿಸುವುದಕ್ಕೆ ಕುಳಿತರೆ, ಆವ ವಿಷಯವನ್ನೂ ಮಾತನಾಡದೆ, ತನ್ನನ್ನು ದೇವರಾಜನೆಂದು ಜನರು ಕರೆವರು ಎಂದು ಮಟ್ಟಿಗೆ ಹೇಳಿ ಸುಮ್ಮನಾಗಿ

ಬಿಡುತ್ತಿದ್ದನು. ಬಂದವರು ಬಲಾತ್ಕಾರದಿಂದ ಹೆಚ್ಚಿನ ಸಂಗತಿಗಳನ್ನು ಕೇಳಿ ತಿಳಿಯುವುದಕ್ಕೆ ಹೆದರುತ್ತಿದ್ದರು.

ದೇವರಾಜನು ಜೀವನಕ್ಕಾಗಿ ಏನು ಕೆಲಸವನ್ನೂ ಮಾಡದೆ, ಮಿತವ್ಯಯದಿಂದ ಸಂಸಾರವನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದನು. ಆವಾಗಲೂ ಪುಸ್ತಕಗಳನ್ನು ಓದುವುದೇ ಇವನಿಗೆ ಕೆಲಸವಾಗಿದ್ದುದರಿಂದ, ಅಕ್ಕಪಕ್ಕದವರು ಈತನನ್ನು ವಿದ್ಯಾವಂತನೆಂದು ತಿಳಿದುಕೊಂಡಿದ್ದರು. ಆಗಿಂದಾಗ ಆರಾದರೂ ಮನೆಗೆ ಬಂದರೆ, ದೇವರಾಜನು ಅವರನ್ನು ಆದರದಿಂದ ಉಪಚರಿಸುತ್ತಿದ್ದನು. ಇದರಿಂದ ಜನರು ಇವನನ್ನು ಗೌರವಶಾಲಿಯೆಂದು ಆಡಿಕೊಳ್ಳುತ್ತಿದ್ದರು.

ದೇವರಾಜನು ಸಾಕುತ್ತಿದ್ದ ಮಗುವು ದಿನದಿನಕ್ಕೆ ವೃದ್ಧಿಯನ್ನೈದುತ್ತಿದ್ದಿತು. ಬಾಲಕನು ಬಲಾಢ್ಯನಾಗಿಯೂ, ತೀಕ್ಷ್ಣಬುದ್ಧಿಯುಳ್ಳವನಾಗಿಯೂ ತೋರಿಕೊಳ್ಳುತ್ತಿದ್ದನು. ಬಾಲಕನು ಪಾಠಶಾಲೆಯ ಮುಖವನ್ನೇ ಅರಿಯದವನಾಗಿದ್ದರೂ, ಆವ ವಿಷಯದಲ್ಲಿಯೂ ಪಾಠಶಾಲೆಯಲ್ಲಿ ಓದತಕ್ಕ ವಿದ್ಯಾರ್ಥಿಗಳಿಗೇನೂ ಕಡಮೆಯಾಗಿರಲಿಲ್ಲ.

ಅಡಿಗಡಿಗೆ ಪ್ರಪಂಚದ ಅನುಭವವುಂಟಾಗುತ್ತಿರಬೇಕೆಂದು ತಿಳಿದು, ಪ್ರತಿ ಶನಿವಾರವೂ ಪಾಠಶಾಲೆಯ ವಿದ್ಯಾರ್ಥಿಗಳೊಡನೆ ಒಡನಾಡಿ ಬರುವುದಕ್ಕಾಗಿ ದೇವರಾಜನು ತನ್ನ ಹುಡುಗನಿಗೆ ಅಪ್ಪಣೆಕೊಟ್ಟಿದ್ದನು. ಅದರಂತೆಯೇ ದೇವರಾಜನ ಮಗನು ಶನಿವಾರದ ದಿನಗಳಲ್ಲಿ ಇತರ ವಿದ್ಯಾರ್ಥಿಗಳೊಡನೆ ಆಟಪಾಟಗಳಲ್ಲಿ ಬೆರೆತು ಇತರರಿಂದ ಅನೇಕ ವಿಷಯಗಳನ್ನು ತಿಳಿದುಕೊಳ್ಳುತ್ತಲೂ, ತನಗೆ ತಿಳಿದುದನ್ನು ಇತರರಿಗೆ ತಿಳಿಯ ಹೇಳುತ್ತಲೂ ಕಾಲವನ್ನು ಸುಖವಾಗಿ ಕಳೆಯುತ್ತಿದ್ದನು. ಇದರಿಂದ ದೇವರಾಜನ ಕುಮಾರನು ಆ ಗ್ರಾಮದಲ್ಲಿ ಎಲ್ಲರಿಗೂ ಪರಿಚಿತನಾಗಿ ಎಲ್ಲರ ಆದರಕ್ಕೂ ಪಾತ್ರನೆನಿಸಿಕೊಂಡಿರುತ್ತಿದ್ದನು. ಈ ಬಾಲಕನೇ ನಮ್ಮ ಪೂರ್ವಪರಿಚಿತನಾದ ರಂಗರಾಜನು. ಈತನು ತನ್ನ ಚಿಕ್ಕವಯಸ್ಸಿನಲ್ಲಿಯೇ ನಾಲ್ಕಾರು ಭಾಷೆಗಳಲ್ಲಿ ವಿಶೇಷ ಪರಿಚಯವನ್ನುಂಟುಮಾಡಿಕೊಂಡು ಅಹಂಕಾರವನ್ನರಿಯದೆಯೇ ಎಲ್ಲರಲ್ಲಿಯೂ ಸಮಭಾವದಿಂದ ವರ್ತಿಸುತ್ತಿದ್ದನು. ದೇವರಾಜನು ಮಗನ ಈ ಗುಣಾತಿಶಯಗಳನ್ನು ಕಂಡು, ದೇಶದಲ್ಲಿ ಸತ್ಪ್ರಜೆಯೆನಿಸಿಕೊಳ್ಳುವುದಕ್ಕೆ ಆವಾವ ವಿದ್ಯೆಗಳು ಅತ್ಯಾವಶ್ಯಕಗಳಾಗಿ ಕಂಡುಬಂದುವೋ ಅವುಗಳೆಲ್ಲ

ವನ್ನೂ ಸಂಪೂರ್ಣ ರೂಪದಿಂದ ಮಗನಿಗೆ ಕಲಿಸಿದನು. ವಿದ್ಯೆಯು ಹೆಚ್ಚಿದಷ್ಟೂ ಅಹಂಭಾವವು ದೂರ ತೊಲಗಿ ವಿನಯವೂ ಹೆಚ್ಚಬೇಕು. ಹೀಗಾಗುವುದೇ ಶ್ರೇಯಸ್ಸಿಗೆ ಮಾರ್ಗವು. ಇದಕ್ಕನುಗುಣವಾಗಿಯೇ ರಂಗರಾಜನು ಒಂದು ದಿನವೂ ತನ್ನ ವಿದ್ಯೆಗಾಗಿ ಹೆಮ್ಮೆ ಪಟ್ಟವನಲ್ಲ; ಇತರರನ್ನು ಅವಿದ್ಯಾವಂತರೆಂದು ಎಂದಿಗೂ ಧಿಕ್ಕರಿಸಿದವನಲ್ಲ. ಕಾಯಶಕ್ತಿಯು ಬಲಹೀನರನ್ನು ರಕ್ಷಿಸುವುದಕ್ಕಾಗಿಯೇ ಹೊರತು ಪರಪೀಡನೆಗೆ ಅಲ್ಲವೆಂದು ತಿಳಿದ ಮಹಾಪುರುಷರಲ್ಲಿ ನಮ್ಮ ಕಥಾನಾಯಕನಾದ ರಂಗರಾಜನು ಮೊದಲನೆಯವನಾಗಿದ್ದನು.

ದೇವರಾಜನು ರಂಗರಾಜನಿಗೆ ಬ್ರಾಹ್ಮಣೋಚಿತವಾದ ವಿದ್ಯೆಗಳನ್ನು ಕಲಿಸಿದ್ದರೂ, ಕ್ಷತ್ರಿಯೋಚಿತವಾದ ವಿದ್ಯೆಗಳನ್ನೂ ಕಲಿಸಿದನು. ಬ್ರಹ್ಮಕ್ಷತ್ರಿಯ ಧರ್ಮಗಳು ಒಂದೆಡೆಯಲ್ಲಿ ಸೇರಿದ ಹೊರತೂ ಪ್ರಾಪಂಚಿಕ ವ್ಯವಹಾರವು ಸುಮುಖವಾಗಿ ನಡೆಯಲಾರದೆಂದು ದೇವರಾಜನು ಚೆನ್ನಾಗಿಯೂ ಅರಿತವನಾಗಿದ್ದನು. ಅದುಕಾರಣವೇ ಆತನು ರಂಗರಾಜನಿಗೆ ಇವೆರಡು ಧರ್ಮಗಳಲ್ಲಿಯೂ ಪೂರ್ಣ ಪಾಂಡಿತ್ಯವುಂಟಾಗುವಂತೆ ಮಾಡಿದನು. ಇಷ್ಟೇ ಅಲ್ಲದೆ, ರಂಗರಾಜನು ರಾಜಧರ್ಮದ ಮರ್ಯಾದೆಯನ್ನೂ, ಪ್ರಜಾಧರ್ಮದ ತತ್ತ್ವವನ್ನೂ ಆಗಿಂದಾಗ ತನ್ನ ತಂದೆಯಿಂದ ಅರಿತುಕೊಳ್ಳುತ್ತಿದ್ದನು. ಇದಕ್ಕಾಗಿಯೇ ದೇವರಾಜನು ರಂಗರಾಜನನ್ನು ಆಗಿಂದಾಗ ರಾಜನಗರಕ್ಕೆ ಕರೆದುಕೊಂಡು ಹೋಗಿ, ಲೋಕದ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಮನದಟ್ಟಾಗುವಂತೆ ಮಾಡುತಿದ್ದನು. ಬಲುಮಾತಿನಿಂದೇನು ? ರಂಗರಾಜನು ತನ್ನ ವಯಸ್ಸಿನ ಹುಡುಗರಿಗಿಂತಲೂ ಎಲ್ಲಾ ವಿಷಯಗಳಲ್ಲಿಯೂ ನೂರ್ಮಡಿಯಾಗಿ ವಿವೇಕಶಾಲಿಯಾಗಿದ್ದನೆಂದು ನಾವು ಹೇಳುವುದಾದರೂ ಅದು ಅತ್ಯುಕ್ತಿಯಾಗಲಾರದು.

ಹೀಗಿರಲೊಂದು ದಿನ ರಂಗರಾಜನಿಗೆ ಹದಿನಾರನೆಯ ವಯಸ್ಸು ತುಂಬಿತು. ಅಂದು ಶನಿವಾರವಾದುದರಿಂದ ರಂಗರಾಜನು ತನ್ನ ಮಿತ್ರರನ್ನು ನೋಡುವುದಕ್ಕಾಗಿ ತೆರಳಿದ್ದನು. ಸಂಧ್ಯಾಕಾಲವಾದುದನ್ನು ನೋಡಿ ರಂಗರಾಜನು ಮನೆಗೆ ಹೊರಟು ಬಂದನು. ಅಷ್ಟು ಹೊತ್ತಿಗೆ ದೇವರಾಜನು ರೋಗದಿಂದ ಪೀಡಿತನಾಗಿ ಹಾಸುಗೆ ಹಿಡಿದು ಮಲಗಿದ್ದನು. ರಂಗರಾಜನು ಇದನ್ನು ಕಂಡು ಹೆದರಿದವನಾಗಿ ತನ್ನ ತಂದೆಯ ಪಕ್ಕದಲ್ಲಿ ಕುಳಿತು—

ತಂದೆಯೇ! ತಾವು ರೋಗದಿಂದ ನರಳುವಂತಿದೆ, ಎಂದು ವಿಶ್ವಾಸದಿಂದ ಮಾತನಾಡಿಸಿದನು.

ದೇವರಾಜ—ಮಗು! ನಾನು ಪ್ರಬಲವಾದ ರೋಗದಿಂದ ನರಳುತ್ತಿರುವೆನು.

ರಂಗರಾಜ—ಈಗಲೇ ಹೋಗಿ ವೈದ್ಯನನ್ನು ಕರೆತರುವೆನು.

ದೇವ—ಬೇಡ, ವೈದ್ಯನಿಂದ ನನಗಾಗುವುದೇನು? ರೋಗವು ಪ್ರಬಲವಾಗುವುದಕ್ಕೆ ಮೊದಲು ನಿನ್ನೊಡನೆ ಕೆಲವು ಮಾತುಗಳನ್ನಾಡಬೇಕೆಂದಿರುವೆನು.

ರಂಗ—ರೋಗವನ್ನು ಉದಾಸೀನಮಾಡಲಾಗದು. ನಾನು ವೈದ್ಯನನ್ನು ಕರೆತರುವೆನು.

ದೇವ—ಪ್ರಯೋಜನವಿಲ್ಲ.

ದೇವರಾಜನು ಹೀಗೆ ಹೇಳಿ ಬಲು ಹೊತ್ತು ಮೌನದಿಂದ ಇದ್ದ ಬಳಿಕ ಹಾಸುಗೆಯ ಮೇಲೆ ಎದ್ದು ಕುಳಿತುಕೊಂಡು—ಮಗು! ನನ್ನನ್ನು ಕುರಿತು ಏನನ್ನಾದರೂ ಪ್ರಶ್ನೆಮಾಡಬೇಕೆಂದು ಎಂದಾದರೂ ಚಿಂತಿಸಿದ್ದೆಯಾ? ಎಂದು ಪ್ರಶ್ನೆಮಾಡಿದನು.

ರಂಗ—ತಂದೆಯೇ! ಆವ ವಿಷಯದಲ್ಲಿ?

ದೇವ—ನನ್ನ ವಿಷಯದಲ್ಲಿ.

ರಂಗ—(ಕೊಂಚ ಹೊತ್ತು ಚಿಂತಿಸಿ) ನಿಮ್ಮ ವ್ಯವಹಾರದಿಂದ, ಏನೋ ಮರ್ಮವಿರಬೇಕೆಂದು ನನಗೆ ಆಗಿಂದಾಗ ತೋರಿಬರುತ್ತಿದ್ದಿತು.

ದೇವ—ಮಗು! ಮರ್ಮವೇನಿದ್ದೀತು? ನಮ್ಮ ಪೂರ್ವಚರಿತೆಯೇ ವಿಚಿತ್ರವಾದುದು. ನನ್ನನ್ನು ನೀನು ನಿಜವಾಗಿಯೂ ತಂದೆಯೆಂದು ತಿಳಿದಿರುವೆಯಾ?

ರಂಗರಾಜನು ಆವ ಉತ್ತರವನ್ನೂ ಕೊಡದೆ ತಲೆವಾಗಿ ಸುಮ್ಮನಿರುವುದನ್ನು ನೋಡಿ, ದೇವರಾಜನು—ಮಗು! ನೀನು ನಾಚುವುದಕ್ಕೂ ಹೆದರುವುದಕ್ಕೂ ಕಾರಣವೇನೂ ಇರಲಾರದು. ನಿನಗೆ ತೋರಿರುವುದನ್ನು ನಿರ್ಭಯನಾಗಿ ತಿಳಿಸು, ಎಂದನು.

ರಂಗ—ಒಂದೊಂದು ವೇಳೆ ನನಗೆ ತಮ್ಮ ವಿಷಯದಲ್ಲಿ ಏನೇನೋ ತೋರುತ್ತಿತ್ತು.

ದೇವ—ಮಗು ! ನೀನು ನನ್ನ ಮಗನಲ್ಲ.
ರಂಗ—ಇದನ್ನು ಕೇಳಿ ನನಗೆ ಭಯವಾಗುವುದು.
ದೇವ—ನಿನಗೆ ಭಯವಾಗುವುದೇ ?
ರಂಗ—ಅಹುದು.
ದೇವ—ಕಾರಣವೇನು ?
ರಂಗ—ತಾವು ನಿಜವಾಗಿಯೂ ನನ್ನ ತಂದೆ.

ದೇವರಾಜನು ಈ ಮಾತನ್ನು ಕೇಳಿದ ಕೂಡಲೆ ಆನಂದಪರವಶನಾಗಿ ರಂಗರಾಜನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅಪ್ಪಿಮುದ್ದಾಡಿದನು. ಬಳಿಕ ಕೊಂಚ ಹೊತ್ತು ಸುಮ್ಮನಿದ್ದು ಮತ್ತೆ ಮಾತನಾಡಿದನು.

"ಮಗು ! ನೀನು ನಿಜವಾಗಿಯೂ ನನ್ನ ಮಗನಲ್ಲ. ಆದರೆ ನಾನು ನಿನಗೆ ಸಮೀಪದ ಬಂಧುವು. ನಮ್ಮ ಕುಲದ ಒಂದೇ ರಕ್ತವು ನಮ್ಮಿಬ್ಬರಲ್ಲಿಯೂ ಹರಿಯುತ್ತಿರುವುದು. ಇದರಲ್ಲಿ ನೀನು ಸಂಶಯಪಡಬೇಕಾದುದಿಲ್ಲ. ನೀನು ನನ್ನ ಮಗನಲ್ಲವೆಂಬುದಕ್ಕೆ ಕಾರಣವನ್ನು ತಿಳಿಸುವೆನು. ನೀನು ನನ್ನ ಮಗನಲ್ಲವಾದರೂ, ನಾನು ನಿನ್ನನ್ನು ನನ್ನ ಮಗನೆಂದೇ ಭಾವಿಸಿ ಪ್ರೀತಿಸುತ್ತಿರುವೆನು. ಕುಲಗೋತ್ರವನ್ನರಿಯದ ಅನಾಥಬಾಲಕನನ್ನು ತಂದು ಸಾಕುತ್ತಿರುವೆನೆಂದು ನೀನು ಆವ ಕಾಲಕ್ಕೂ ಭಾವಿಸಲಾಗದು. ನೀನು ಸತ್ಕುಲಪ್ರಸೂತನು. ಕುಲದ ವಿಚಾರವಾಗಿಯಾಗಲಿ, ತಾಯಿತಂದೆಗಳ ವಿಚಾರವಾಗಿಯೇ ಆಗಲಿ, ನೀನು ನಾಚಿಕೊಂಡು ತಲೆವಾಗಿ ನಡೆಯಲು ಕಾರಣವೇನೂ ಇರಲಾರದು. ಇದರ ವಿಚಾರವು ನಿನಗೆ ಮುಂದೆ ಗೊತ್ತಾಗುವುದು. ಇದನ್ನು ನೀನು ಈಗ ಅರಿಯಲಾರೆ. ನೀನು ದೇವರ ದಯೆಯಿಂದ ಆಯುಸ್ಸು ಹಾಕಿಕೊಂಡು ಮುಂದೆ ಬದುಕಿರುವುದಾದರೆ, ಈ ವಿಚಾರವು ನಿನಗೆ ಪರಮಾಶ್ಚರ್ಯವನ್ನುಂಟುಮಾಡದಿರದು. ಆದರೆ ಈಗ ನಾನು ನಿನಗೆ ಅದೊಂದನ್ನೂ ತಿಳಿಸಲಾರದವನಾಗಿರುವೆನು.

ಮಗು ! ನೀನು ಅದೃಷ್ಟಕುಮಾರ, ನಿಜವಾಗಿಯೂ ನೀನು ಅದೃಷ್ಟದ ಪ್ರೇಮಪುತ್ರನು. ಎಂದಾದರೊಂದು ದಿನ ನೀನಿದನ್ನು ಅರಿಯುವೆ. ನಿನ್ನ ಜನ್ಮದ ಗುಟ್ಟು ಅತ್ಯದ್ಭುತವಾದುದು. ಮುಂದೆ ಇದನ್ನು ನೀನು ಅರಿಯುವುದರಿಂದ ನಿನಗೆ ಬ್ರಹ್ಮಾನಂದವೇ ಉಂಟಾದೀತು. ಅದಕ್ಕಾಗಿ ನೀನು ಈಗಳಿಂದಲೂ ತತ್ತರಗುಟ್ಟಬೇಕಾದುದೇನೂ ಇರುವುದಿಲ್ಲ. ಆ ಚಿಂತೆಯನ್ನು ಇಟ್ಟುಕೊಂಡು ನೀನು ಕೊರಗಿ ಕೊರಗಿ ಪ್ರಯೋಜನವಿರಲಾರದು.

ಮಗು ! ನನಗೇನಾದರೂ ಇಷ್ಟರಲ್ಲಿಯೇ ಮರಣವು ಸಂಭವಿಸುವುದಾದರೆ, ನೀನು ಎದೆಗೆಡದೆ ಜೀವನೋಪಾಯದ ಮಾರ್ಗವನ್ನು ಹುಡುಕಿಕೊಳ್ಳು. ಗೌರವದಿಂದ ನೀನು ಜೀವಿಕೆಯನ್ನು ಸಂಪಾದಿಸಿಕೊಳ್ಳುವುದಾದರೆ, ನಿನ್ನ ಜನ್ಮ ವೃತ್ತಾಂತವು ನಿನಗೆ ಸುಖದಾಯಕವಾಗಿ ಪರಿಣಮಿಸುವುದು."

ರಂಗರಾಜನು ಈ ಮಾತನ್ನು ಕೇಳಿ ಕಳವಳಗೊಂಡವನಾದರೂ ತನ್ನ ಹಾವಭಾವಗಳನ್ನು ಹೊರಗೆ ತೋರ್ಪಡಿಸದೆ ತಂದೆಯನ್ನು ಕುರಿತು—ತಂದೆಯೇ ! ನನ್ನ ನಿಜವಾದ ಹೆಸರೇನು ? ಎಂದನು.

ದೇವ—ನಿನ್ನ ಹೆಸರನ್ನು ವ್ಯತ್ಯಾಸಮಾಡಿಲ್ಲ.

ರಂಗ—ರಂಗರಾಜನೆಂಬುದು ನನ್ನ ನಿಜವಾದ ಹೆಸರೇ ?

ದೇವ—ಅಹುದು.

ರಂಗ—(ಕೊಂಚಹೊತ್ತು ಆಲೋಚಿಸಿ) ನನ್ನ ಮಾತಾಪಿತೃಗಳು ಶ್ಲಾಘ್ಯವಾದ ಕುಲದಲ್ಲಿ ಜನಿಸಿ ಮಾನ್ಯರೆಂದೆನಿಸಿಕೊಂಡಿದ್ದರಷ್ಟೇ ?

ದೇವ—ನಿನ್ನ ಪಿತೃಗಳಂತಹ ಪವಿತ್ರವಂಶದವರು ಈ ಲೋಕದಲ್ಲಿಯೇ ಅತಿವಿರಳರು.

ಮುದುಕನು ಈ ಮಾತನ್ನಾಡುವಾಗ ಉತ್ಸಾಹದಿಂದ ತುಂಬಿದ ಗಾಂಭೀರ್ಯವನ್ನು ತೋರ್ಪಡಿಸಿಕೊಂಡನು. ಇದನ್ನು ರಂಗರಾಜನೂ ನೋಡಿದನು.

ವಾಚಕಮಹಾಶಯ ! ರಂಗರಾಜನ ಪೂರ್ವವೃತ್ತಾಂತವನ್ನು ನಾವು ಗೋಪ್ಯವಾಗಿಟ್ಟು ಕಥೆಯನ್ನು ಬಳೆಯಿಸುವುದರಿಂದ, ಆತನ ವಿಷಯದಲ್ಲಿ ದುರಭಿಪ್ರಾಯವನ್ನು ಕೊಂಚವಾದರೂ ತೋರ್ಪಡಿಸಲಾಗದು. ರಂಗರಾಜನು ಎಲ್ಲರಂತೆಯೇ ಆರೋಗದೃಢಕಾಯನಾದ ಯುವಕನು. ಆತನು ಮುದುಕನ ವಿಲಕ್ಷಣ ವರ್ತನದಿಂದ ಕೊಂಚವಾದರೂ ಬೇಸರವಡದೆ, ಆತನ ವಿಷಯದಲ್ಲಿ ಸತ್ಪುತ್ರನಂತೆ ನಡೆದುಕೊಳ್ಳುತ್ತಿದ್ದನು. ಮುದುಕನೂ ರಂಗರಾಜನ ವಿಷಯದಲ್ಲಿ ಅತ್ಯಾದರವನ್ನು ತೋರುತ್ತಾ, ರಂಗರಾಜನಿಗೆ ತಂದೆಯಿಲ್ಲವೆಂಬ ಕೊರಗುಂಟಾಗದಂತೆ ಕಾಪಿಟ್ಟುಕೊಂಡು ಬರುತ್ತಿದ್ದನು. ಜನರು ಮುದುಕನ ವಿಲಕ್ಷಣಸ್ವಭಾವವನ್ನು ಕುರಿತು ಬಗೆಬಗೆಯಾಗಿ ಮಾತನಾಡಿಕೊಳ್ಳುತ್ತಿದ್ದರು. ಜನರನ್ನು ಮೆಚ್ಚಿಸುವವರಾರು ?

ರಂಗರಾಜನು ತಂದೆಯ ಮಾತನ್ನು ಕೇಳಿ— ಪೂಜ್ಯಪಾದ ! ತಮ್ಮ ಮಾತನ್ನು ಕೇಳಿ ನನಗೆ ತುಂಬಾ ಸಂತೋಷವಾಯಿತು, ಎಂದು ನುಡಿದನು.

ದೇವ— ನಿನಗೆ ಸಂತೋಷವನ್ನುಂಟುಮಾಡಬೇಕೆಂಬುದೇ ನನ್ನ ಇಷ್ಟವು. ಈ ಸಂದರ್ಭದಲ್ಲಿ ನಿನಗೊಂದು ವಿಷಯವನ್ನು ತಿಳಿಸಬೇಕೆಂದಿರುವೆನು. ನಿನ್ನ ತಂದೆಯು ಸತ್ಯಸಂಧನು. ಕೊಟ್ಟಮಾತನ್ನು ತಪ್ಪಿ ನಡೆಯುವುದೂ ಪ್ರಾಣ ಬಿಡುವುದೂ ಒಂದೇ ಎಂದು ಆತನು ತಿಳಿದಿದ್ದನು.

ರಂಗ—ಇದನ್ನು ಕೇಳುವುದಕ್ಕೆ ನನಗೆ ತುಂಬಾ ಸಂತೋಷವಾಗುವುದು.

ದೇವ—ನೀನೂ ಆತನಿಗೆ ಮಗನಾದುದಕ್ಕೆ ಆತನಂತೆಯೇ ಇರಬಲ್ಲೆಯಾ ?

ರಂಗ—ನನ್ನ ತಂದೆಯ ಸ್ವಭಾವವು ನನ್ನಲ್ಲಿಯೂ ರಕ್ತಗತವಾಗಿರುವುದು. ನಾನೂ ನನ್ನ ತಂದೆಯಂತೆಯೇ ಮಾನ್ಯತೆಯನ್ನು ಪಡೆಯಬೇಕೆಂದು ಬಯಸಿರುವೆನು.

ದೇವ—ಮಗು ! ನನ್ನ ಸಂತೋಷಕ್ಕೆ ಪಾರವೇ ಇಲ್ಲ. ಸತ್ಕುಲಪ್ರಸೂತನಾದುದರಿಂದ, ನೀನೂ ನಿನ್ನ ತಂದೆಯಂತೆಯೇ ಕೊಟ್ಟ ಮಾತ ತಪ್ಪಿ ನಡೆಯತಕ್ಕವನಲ್ಲವೆಂದು ನಾನು ಚೆನ್ನಾಗಿಯೂ ಬಲ್ಲೆನು.

ರಂಗ—ತಾವು ನನ್ನನ್ನು ಸಂಪೂರ್ಣವಾಗಿಯೂ ನಂಬಬಹುದು.

ದೇವ—ನಾನು ನಿನ್ನನ್ನು ನಂಬಲು ಕಾರಣವೂ ಇರುವುದು. ನಿನ್ನಲ್ಲಿ ಮನೋದಾರ್ಢ್ಯವುಂಟು. ನಿನ್ನ ತಂದೆಯ ಗುಣವು ನಿನ್ನಲ್ಲಿ ಸಂಪೂರ್ಣವಾಗಿ ಇಳಿದು ಬಂದಿರುವುದು. ಈ ಮಹತ್ತರವಾದ ಗುಣವು ನಿನ್ನ ತಂದೆಯಲ್ಲಿ ಇಲ್ಲದಿದ್ದರೆ, ನಿನ್ನ ವಂಶವು ಬಳೆಯುವುದಕ್ಕೆ ಆಸ್ಪದವೇ ಇಲ್ಲದಂತಾಗಿ ಹೋಗಿಬಿಡುತಿದ್ದಿತು.

ರಂಗ—ನನ್ನ ತಂದೆಯ ವಿಷಯವನ್ನಾದರೂ ತಿಳಿಸೋಣವಾಗಲಿ.

ದೇವ—ಅದನ್ನು ಮಟ್ಟಿಗೆ ತಿಳಿಸಲಾರೆನು. ಆ ಗುಟ್ಟು ಈಗ ರಟ್ಟಾಗದು. ನಿನಗೆ ಜೀವನಯಾತ್ರೆಯಲ್ಲಿ ಅನೇಕ ಪರೀಕ್ಷೆಗಳಾಗಲೇ ಬೇಕಾಗಿರುವುದು. ನೀನು ಅವುಗಳಲ್ಲಿ ತೇರ್ಗಡೆಯನ್ನು ಹೊಂದಲೇ ಬೇಕು. ನಿನ್ನ ಮುಂದಣ ಜೀವನ ಮಾರ್ಗವು ಅತಿ ಗಹನವಾದುದರಿಂದ, ನೀನು ಎದೆಗೆಡದೆ ಅದರಲ್ಲಿ ಸಂಚರಿಸುವುದಾದರೆ ನಿನಗೆ ಪರಿಣಾಮದಲ್ಲಿ ಸುಖವೇ ಉಂಟಾಗುವುದು. ಆಗಲೇ ನಿನ್ನ ತಂದೆತಾಯಿಗಳ ಚರಿತ್ರವೂ ತಿಳಿದು ಬಂದು ನಿನಗೆ ಸುಖವು ಇಮ್ಮಡಿಸುವುದು. ಇದರಿಂದ ನಿನಗೆ ಆಸ್ತಿಪಾಸ್ತಿಗಳಿರುವುವೆಂದು

ಮಟ್ಟಿಗೆ ತಿಳಿಯಬೇಡ. ನಿನಗೆ ಪಿತ್ರಾರ್ಜಿತವಾದ ಸಂಪತ್ತೇನೂ ಇಲ್ಲ. ಕಾರಣವೇನೆಂದರೆ—ನಿನ್ನ ತಂದೆಯು ದರಿದ್ರನಾಗಿಯೇ ಮಡಿದನು.

ನೀನಾದರೋ ಮೈಮುರಿದು ಕೆಲಸಮಾಡಿ ನಿನ್ನ ಜೀವಿಕೆಯನ್ನು ನೀನೇ ಸಂಪಾದಿಸಿಕೊಳ್ಳಬೇಕು. ದೇವರು ನಿನಗೆ ಮುಂದಕ್ಕೆ ಒಳ್ಳೆಯದನ್ನೇ ಮಾಡಿಯಾನು. ಇದನ್ನೇ ದೃಢವಾಗಿ ನಂಬಿಕೊಂಡು ಮಾಡಬೇಕಾದುದನ್ನು ಮಾಡದೇ ವ್ಯರ್ಥವಾಗಿ ಕಾಲಹರಣಮಾಡುವುದಾದರೆ, ನಿನಗೆ ಅಡಿಗಡಿಗೂ ತೊಂದರೆಗಳೇ ಉಂಟಾದಾವು, ಎಚ್ಚರಿಕೆ! ಮಾನವನು ಅದೃಷ್ಟವಂತನಾದರೂ ಪುರುಷಕಾರವನ್ನು ಎಂದಿಗೂ ಬಿಡಬಾರದು. ಇದೇ ಏಳಿಗೆಗೆ ಪ್ರಥಮ ಸೋಪಾನವು.

ರಂಗ—ತಂದೆಯೇ! ನಾನು ಪೈತೃಕ ಸಂಪತ್ತಿಗಾಗಿ ಬಯಸುತ್ತಿಲ್ಲ. ಈ ದೇಹದಲ್ಲಿ ಶಕ್ತಿಯಿರುವ ವರೆಗೂ ನಾನು ಶ್ರಮಪಟ್ಟು ಸಂಪತ್ತನ್ನು ಅರ್ಜಿಸುವೆನು.

ದೇವ—ಮಗು! ನೀನು ಈರೀತಿಯಾದ ಅಭಿಪ್ರಾಯ ಪಡುವೆಯಾ?

ರಂಗ—ಇದೇ ನನ್ನ ಇಷ್ಟವು.

ದೇವ—ಹಾಗಾದರೆ, ದೇವರ ದಯೆಯಿಂದ ನಿನಗೆ ಸಂಪತ್ತುಂಟಾಗಬಹುದು. ಅದನ್ನು ಗಣನೆಗೆ ತಾರದೆ, ನೀನು ಪುರುಷಕಾರದಿಂದ ಬೇಕಾದ ಹಾಗೆ ಹಣವನ್ನು ಸಂಪಾದಿಸು. ಆದರೆ, ಹಣವೇ ಪ್ರಧಾನವೆಂದು ಅದನ್ನು ದುರ್ಮಾರ್ಗದಿಂದ ಮಟ್ಟಿಗೆ ಸಂಪಾದಿಸಲು ಪ್ರಯತ್ನ ಪಡಬೇಡ. ಕೆಟ್ಟ ಮಾರ್ಗದಿಂದ ಹಣವನ್ನು ಸಂಪಾದಿಸಿ ಹಣಗಾರನೆಂದು ಹೊಗಳಿಸಿಕೊಂಡು ಬಾಳುವುದಕ್ಕಿಂತಲೂ ನ್ಯಾಯ ಮಾರ್ಗದಿಂದ ದರಿದ್ರನಾಗಿ ಬಾಳುವುದೇ ಮೇಲು.

ರಂಗ—ಪೂಜ್ಯಚರಣ! ನನ್ನ ಅಭಿಪ್ರಾಯವೂ ಇದೇ ಆಗಿರುವುದರಿಂದ, ತಾವು ಈ ವಿಷಯವನ್ನು ಲಂಬಿಸಿ ಹೇಳಬೇಕಾದುದೇನೂ ಇರುವುದಿಲ್ಲ.

ದೇವ—ಮಗು! ನಿನ್ನ ಬಾಯಿಂದ ಇಂತಹ ಮಾತುಗಳನ್ನು ಕೇಳಿ ನನಗೆ ಪರಮಾನಂದವಾಗುತ್ತಿರುವುದು. ನಿನಗೆ ಎಂದಾದರೊಂದು ದಿನ ಸಂಪತ್ತು ತಾನಾಗಿಯೇ ಒದಗಿ ಬರುವುದು.

ಮಗು! ಪ್ರಕೃತೋಚಿತವಾದ ಮುಖ್ಯವಿಷಯವನ್ನು ತಿಳಿಸುವೆನು. ಈ ನೊಹರಿನ ಕಾಗದವನ್ನು ನೀನು ತೆಗೆದುಕೊಳ್ಳು. ನಿನಗೆ ಇಪ್ಪತ್ತೊಂದನೆಯ

ವಯಸ್ಸಾದ ಕೂಡಲೆ. ನೀನು ಈ ಕಾಗದವನ್ನು ನಿಕ್ಷೇಪ ರಕ್ಷಣ ಸಮಿತಿಗೆ ತೆಗೆದುಕೊಂಡು ಹೋಗಿ ಅದರ ಮುಖ್ಯಾಧಿಕಾರಿಯ ಕೈಗೆ ಕೊಡು. ಆ ಮುಖ್ಯಾಧಿಕಾರಿಯು ನನಗೆ ಪರಮ ಬಂಧುವು. ಆತನು ಚಿಕ್ಕವಯಸ್ಸಿನವ ನಾಗಿರುವುದರಿಂದ ಬೇಗನೆ ಸಾಯುವ ಸಂಭವವಿರಲಾರದು. ಒಂದು ವೇಳೆ ನೀನು ಅಲ್ಲಿಗೆ ಹೋಗುವ ಕಾಲದೊಳಗಾಗಿ ಆತನು ಅಕಾಲಮೃತ್ಯುವಿಗೆ ತುತ್ತಾಗಿದ್ದರೂ, ಆ ಸಮಿತಿಯು ನಾಶವಾಗಲಾರದು. ಸಮಿತಿಯು ಇರುವ ವರೆಗೂ ಅವನಾದರೊಬ್ಬನು ಮುಖ್ಯಾಧಿಕಾರಿಯು ಇದ್ದೇ ಇರುವನು. ನೀನು ಅಲ್ಲಿಗೆ ಹೋದ ಕಾಲದಲ್ಲಿ ಮುಖ್ಯಾಧಿಕಾರಿಯು ಅವನೇ ಇರಲಿ, ಅವನ ಕೈಗೆ ಈ ಕಾಗದವನ್ನು ಕೊಡು. ನಾನು ಹೇಳಿರುವ ಕಾಲಕ್ಕೆ ಮೊದಲು ಮಟ್ಟಿಗೆ ಅಲ್ಲಿಗೆ ಹೋಗದಿರು. ಒಂದು ವೇಳೆ ನೀನು ಹೋದರೂ ಪ್ರಯೋಜನವಾಗ ಲಾರದು. ಮಗು ! ನನ್ನ ಇಷ್ಟದಂತೆ ನೀನು ನಡೆಯ ಬಲ್ಲೆಯಾ ?

ರಂಗ—ತಂದೆಯೇ ! ನಡೆಯುವೆನು.

ದೇವ—ನಿನ್ನ ತಂದೆಯು ಗೌರವಕ್ಕೆ ಪಾತ್ರವಾಗಿದ್ದನೆಂಬುದು ಜ್ಞಾಪಕದಲ್ಲಿರುವುದಷ್ಟೇ ?

ರಂಗ—ತಾವು ನಿಶ್ಚಿಂತರಾಗಿರೋಣವಾಗಲಿ. ನಿಯಮಿತ ಕಾಲಕ್ಕೆ ಮೊದಲು ನಾನು ಅವ ಕಾರಣದಿಂದಲೂ ಆ ಸಮಿತಿಯ ಬಳಿಗೆ ಹೋಗೆನು.

ದೇವ—ಮಗು ! ಈ ಕಾಗದವನ್ನು ಕೊಟ್ಟ ಕೂಡಲೆ, ನಿನಗೆ ಸಂಪತ್ತು ಸಿಕ್ಕಿಬಿಡುವುದೆಂದು ನೀನು ಸ್ವಪ್ನದಲ್ಲಿಯೂ ಎಣಿಸಬೇಡ, ಕಂಡೆಯಾ? ಅಲ್ಲಿನ ಮುಖ್ಯಾಧಿಕಾರಿಯು ನಿನ್ನನ್ನು ಕಂಡ ಕೂಡಲೆ ಈ ಕಾಗದವನ್ನು ತೆಗೆದುಕೊಂಡು ನಿನಗೊಂದು ಪೆಟ್ಟಿಗೆಯನ್ನು ಕೊಡುವನು. ಅದರಲ್ಲಿ ಒಂದು ಉಂಗುರವೂ, ನನ್ನ ಜೀವಮಾನದ ಚರಿತ್ರೆಯೂ, ಹಾಗೂ, ನೀನು ಮುಂದೆ ದೊಡ್ಡವನಾದ ಮೇಲೆ ಅವ ರೀತಿಯಲ್ಲಿ ಬದುಕಿ ಬಾಳಬೇಕೆಂಬ ಬಗೆಗೆ ಕೆಲವು ಉಪದೇಶ ವಾಕ್ಯಗಳೂ ಇರುವುವು. ಇವು ಹೊರತಾಗಿ ಅದ ರಲ್ಲಿ ಒಂದು ಕಾಸೂ ನಿನಗೆ ದೊರೆಯಲಾರದು. ಹಣ ಸಿಕ್ಕುವುದೆಂಬ ಆಸೆ ಯು ನಿನಗಿರುವುದಾದರೆ ಅದನ್ನು ಸಂಪೂರ್ಣವಾಗಿ ಮರೆತು ಬಿಡು. ಆದರೆ ಆ ಪೆಟ್ಟಿಗೆಯಲ್ಲಿ ನೀನು ತಿಳಿಯಬೇಕೆಂದು ಬಯಸಬಹುದಾದ ಗುಟ್ಟಿನ ಸುದ್ದಿಗಳೆಲ್ಲವೂ ನಿನ್ನ ಗೋಚರಕ್ಕೆ ಬರುವುವು.

ರಂಗ—ನನಗೆ ಹಣದ ದುರಾಶೆಯಿಲ್ಲವು. ತಮ್ಮ ಅಪ್ಪಣೆಯಾದಂತೆ ನಡೆದುಕೊಳ್ಳುವೆನು.

ದೇವ—ಮತ್ತೊಂದು ವಿಷಯವೇನೆಂದರೆ—ಈ ಮನೆಯೂ ಇದಕ್ಕೆ ಸೇರಿದ ಸ್ವಲ್ಪ ನೆಲವೂ ನನ್ನ ಸ್ವಾರ್ಜಿತವಾದ ಸಂಪತ್ತು. ಇವುಗಳ ಮೇಲೆ ನಿನಗೆ ಕೊಂಚವಾದರೂ ಹಕ್ಕಿರುವುದಿಲ್ಲವಾದುದರಿಂದ, ನಾನು ಇವನ್ನು ಮತ್ತೊಬ್ಬನಿಗೆ ದಾನಮಾಡಿ ಬಿಡುವೆನು. ನಿನಗಾದರೋ ನನ್ನದಾಗಿ ಏನೂ ದೊರೆಯಲಾರದು. ನಿನ್ನ ಮೈಮೇಲಿರುವ ಬಟ್ಟೆಬರೆಗಳು ಮಟ್ಟಿಗೆ ನಿನ್ನ ವೆಂದು ನೀನು ಸಂತೋಷಪಟ್ಟುಕೊಳ್ಳತಕ್ಕುದಿದೆ. ನಾನು ಸಾಯುವುದಾದರೆ, ನನ್ನ ಉತ್ತರಕ್ರಿಯಾದಿಗಳಿಗೆ ಬೇರೆಯ ಏರ್ಪಾಡು ಮಾಡಿರುವೆನು. ಇದಕ್ಕಾಗಿ ನೀನು ಚಿಂತಿಸಬೇಕಾದುದೇನೂ ಇರುವುದಿಲ್ಲ. ನಾನು ಸತ್ತಕೂಹಲೆ, ನೀನು ರಾಜನಗರಕ್ಕೆ ಹೋಗಿ ನಿನ್ನ ಜೀವಿಕೆಯನ್ನು ನೀನೇ ಹುಡುಕಿಕೊಳ್ಳಬೇಕು. ಆದರೆ ನಿನ್ನ ಇಪ್ಪತ್ತೊಂದನೆಯ ವಯಸ್ಸನ್ನು ಮಟ್ಟಿಗೆ ಮರೆಯಲಾಗದು. ಈ ಕಾಗದವನ್ನು ಈ ಸಣ್ಣ ಕೈಪೆಟ್ಟಿಗೆಯಲ್ಲಿ ಭದ್ರಪಡಿಸಿ, ಇದನ್ನು ಒಂದು ಗೋಪ್ಯವಾದ ಸ್ಥಳದಲ್ಲಿ ಹೂತಿಡು. ನಾನು ಸಾಯುವುದನ್ನೇ ನೀನು ನಿರೀಕ್ಷಣೆಮಾಡಬೇಕಾದುದಿಲ್ಲ ಈ ಕೆಲಸವನ್ನು ನಾಳೆಯೇ ಮಾಡಿಬಿಡು.

ರಂಗ—ತಂದೆಯೇ! ಈಗಾಗಲೇ ನಾವು ಸಾಯುವುದೆಂದರೇನು?

ದೇವ—ವತ್ಸ! ಸಾವು ಆರಿಗೆ ತಪ್ಪಿದುದು? ನಾನು ಇಂದು ಸಾಯದಿದ್ದರೂ ನಾಳೆಯಾದರೂ ಸಾಯಲೇಬೇಕು. ಇದಕ್ಕಾಗಿ ನೀನು ಕೊರಗಬೇಕಾದುದಿಲ್ಲ.

ಈ ವಿಷಯವನ್ನು ನಿನಗೆ ತಿಳಿಸುವುದಕ್ಕೆ ಮೊದಲೇ ನಾನೆಲ್ಲಿ ಸತ್ತುಹೋಗುವೆನೋ ಎಂಬ ಭಯವು ನನ್ನನ್ನು ಆವರಿಸಿದ್ದಿತು. ಈಗ ನನಗೆ ಆವ ಭಯವೂ ಇಲ್ಲ. ಇನ್ನು ನಾನು ಎಂದು ಬೇಕಾದರೂ ಸಾಯಬಹುದು. ನೀನು ಮಟ್ಟಿಗೆ ಈ ಗುಟ್ಟನ್ನು ಆರಿಗೂ ತಿಳಿಸಲಾಗದು; ಅಲ್ಲದೆಯೂ ನಿನ್ನ ವಿಷಯವಾಗಿಯೂ ನೀನು ಆರೊಡನೆಯೂ ಮಾತನಾಡಕೂಡದು. ನಾನು ಹೇಳಿದುದೆಲ್ಲವನ್ನೂ ಚೆನ್ನಾಗಿಯೂ ಜ್ಞಾಪಕದಲ್ಲಿಟ್ಟುಕೊಂಡು ಕೆಲಸ ಮಾಡು, ನಿನಗೆ ಭಗವಂತನು ಮಂಗಳವನ್ನುಂಟುಮಾಡುವನು.

ರಂಗ—ತಮ್ಮಪ್ಪಣೆಯಂತೆಯೇ ನಡೆಯುವೆನು.

ದೇವ—ಮಗು! ಈ ಪೆಟ್ಟಿಗೆಯನ್ನು ಎಲ್ಲಿಯೋ ಹೂತಿಟ್ಟು ಎಲ್ಲಿಯೋ ಹುಡುಕುವಂತೆ ಮಾಡಿಕೊಳ್ಳಬೇಡ. ನಿನಗೆ ಮರೆಯದ, ಹಾಗೂ ಮತ್ತೊಬ್ಬರಿಗೆ ಗೊತ್ತಾಗದ ಏಕಾಂತಸ್ಥಲದಲ್ಲಿ ಬೈತಿಡು.

ರಂಗ—ಅದಕ್ಕೆ ಸರಿಯಾದ ಸ್ಥಲವೊಂದನ್ನು ಆಲೋಚಿಸಿರುವೆನು.

ದೇವ—ಹಾಗಾದರೆ ಸರಿ. ನಾನು ನಿನಗೆ ಮತ್ತೇನನ್ನೂ ಹೇಳಬೇಕಾದುದಿಲ್ಲ. (ಜ್ಞಾಪಿಸಿಕೊಂಡವನಾಗಿ) ವತ್ಸ! ಮತ್ತೊಂದು ವಿಷಯವಿರುವುದು.

ರಂಗ—ಅಪ್ಪಣೆ.

ದೇವ—ಮಗು ! ನಾನು ನಿನ್ನ ವಿಷಯದಲ್ಲಿ ಇಂದಿನ ವರೆಗೂ ಪ್ರೀತಿಯುಳ್ಳವನಾಗಿದ್ದೆನು.

ರಂಗ—ತಮಗಿಂತಲೂ ಹೆಚ್ಚಾಗಿ ಮತ್ತಾರೂ ನನ್ನನ್ನು ಪ್ರೀತಿಸರು.

ದೇವ—ನಿನ್ನ ವಿಷಯದಲ್ಲಿ ನಾನು ಹುಬ್ಬು ಗಂಟಿಕ್ಕಿ ಕಠಿನೋಕ್ತಿಗಳನ್ನಾಡಿಲ್ಲ.

ರಂಗ—ಎಂದಿಗೂ ಇಲ್ಲ, ತಾವು ನನ್ನನ್ನು ತಾಯಿಯಂತೆ ಪ್ರೀತಿಸಿ ತಂದೆಯಂತೆ ರಕ್ಷಿಸಿರುವಿರಿ.

ದೇವ—ನಿನ್ನ ಗುಟ್ಟು ನಿನಗೆ ಗೊತ್ತಾದ ಮೇಲೂ ಇದೇ ಅಭಿಪ್ರಾಯವುಳ್ಳವನಾಗಿರುವೆಯಾ ?

ರಂಗ—ಮಾಡಿರುವುದು ಎಂದಿಗೆ ಹೋದೀತು ! ನಾನೆಂದಿಗೂ ಗಾಳಿ ಬಂದಹಾಗೆಲ್ಲಾ ತೂರಿಕೊಳ್ಳತಕ್ಕವನಲ್ಲ.

ದೇವ—ಹುಡುಗರ ಪ್ರತಿಜ್ಞೆಯು ಪ್ರತಿಜ್ಞೆಯಲ್ಲ. ಹುಡುಗರು ದೊಡ್ಡವರಾದ ಮೇಲೆ ಎಲ್ಲವನ್ನೂ ಮರೆತುಬಿಡುವುದುಂಟು.

ರಂಗ—ಅದು ರಂಗರಾಜನಿಗೆ ಹೇಳತಕ್ಕ ಮಾತಲ್ಲ. ರಂಗರಾಜನು ಸ್ಥಿರಪ್ರತಿಜ್ಞನು.

ದೇವ—ಮಗು ! ನನ್ನಲ್ಲಿ ಲೋಪದೋಷಗಳಿದ್ದು ಅಪಚಾರವೇನಾದರೂ ನಡೆದಿದ್ದರೆ, ಅದನ್ನು ಮರೆತು ನನ್ನನ್ನು ಮನ್ನಿಸುವೆಯಾ ?

ರಂಗ—ತಂದೆಯು ಮಗನಿಗೆ ಅಪ್ಪಣೆಮಾಡಬೇಕೇ ಹೊರತು ಹೀಗೆ ಕೇಳಬಾರದು.

ದೇವರಾಜನು ರಂಗರಾಜನ ಸದ್ಗುಣಗಳಿಗೆ ಆಶ್ಚರ್ಯಪಟ್ಟುಕೊಂಡು ಧಾರಾಕಾರವಾಗಿ ಕಣ್ಣೀರನ್ನು ಸುರಿಸುತ್ತಾ ಮಗನನ್ನು ಬಾಚಿ ತಬ್ಬಿಕೊಂಡನು. ಆತನ ಪ್ರಾಣವಾಯುವು ಹಾರಿಯೇ ಹೋಯಿತು. ರಂಗರಾಜನು ದಿಕ್ಕು ತೋರದವನಾಗಿ ಅಲ್ಲಿಯೇ ಕುಳಿತುಬಿಟ್ಟನು.

---

# ಮೂರನೆಯ ಅಧ್ಯಾಯ.

ರಂಗರಾಜನ ರಾಜನಗರ ಪ್ರವೇಶ. ಜೀವನಯಾತ್ರೆಯೆಂಬ ಘೋರ ಯುದ್ಧದಲ್ಲಿ ಗಣೇಶನ ಪೂಜೆ. ಅಪೂರ್ವ ಮಿತ್ರೋದಯ. ಅಧಿಕಾರ ಸಂಬಂಧ ಕಾರಾವಾಸದ ಅಕಾಲಕಾಲರಾತ್ರಿ.

ದೇವರಾಜನ ಪ್ರಾಣವು ಹಾರಿಯೇ ಹೋಯಿತು. ಮೃತ್ಯುವಿನ ಅತ್ಯಾಚಾರವನ್ನು ತಡೆಯಬಲ್ಲವರಾರು? ರಂಗರಾಜನು ತಂದೆಗೆ ಮರಣವು ಒದಗಿ ಬಂದುದನ್ನು ನೋಡಿ ದಿಕ್ಕುತೋರದವನಾಗಿ ಶೂನ್ಯಭಾವವನ್ನು ತಾಳಿಬಿಟ್ಟನು. ಈ ರೀತಿಯಲ್ಲಿ ಎಷ್ಟು ಹೊತ್ತು ಕಳೆದುದೋ ಅದು ಅವನಿಗೆ ಗೊತ್ತಾಗಲೇ ಇಲ್ಲ. ಎಷ್ಟೋ ಹೊತ್ತಿನ ಮೇಲೆ ಅವನಿಗೆ ಜ್ಞಾನೋದಯವಾಗಲು, ಅವನು ತಂದೆಗಾಗಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಅತ್ತಲ್ಲದೆ ದುಃಖವು ಶಾಂತವಾಗಲಾರದು. ದುಃಖವು ಒದಗಿಬಂದುದಕ್ಕಾಗಿ ಅಳಬೇಕು. ದುಃಖವು ಶಾಂತವಾಗುವುದಕ್ಕಾಗಿಯೂ ಅಳಬೇಕು. ದುಃಖದ ಮಹಿಮೆಯು ಅತಿಗಹನವಾದುದು ಅಯ್ಯೋಪಾಪ! ಪ್ರಪಂಚದ ರೀತಿಯನ್ನೇ ಅರಿಯದ ಪಸುಳೆಯಾದ ರಂಗರಾಜನು ಇದರ ತತ್ತ್ವವನ್ನು ಹೇಗೆ ತಾನೇ ಅರಿಯಬಲ್ಲನು? ಮನೆಯಲ್ಲಿ ಮತ್ತಾರಾದರೂ ಇದ್ದಿದ್ದರೆ, ದುಃಖವು ಅಷ್ಟಾಗಿ ಭಯಂಕರವಾಗಿ ತೋರುತ್ತಿರಲಿಲ್ಲ ಮಾಡುವುದೇನು? ರಂಗರಾಜನು ಮನದಣಿಯೆ ಅತ್ತು ಅತ್ತು ಬೇಸತ್ತವನಾಗಿ ಕೊಂಚ ಹೊತ್ತಿನ ಮೇಲೆ ತಾನೇ ಶಾಂತನಾಗಿ ಮುಂದಣ ಕರ್ತವ್ಯದಲ್ಲಿ ತೊಡಗಿದನು. ಯಥಾಕ್ರಮವಾಗಿ ಮೃತನಿಗೆ ನಡೆಯಬೇಕಾದ ಕೃತ್ಯಗಳೆಲ್ಲವೂ ನಾಂಗವಾಗಿ ನಡೆದು ಹೋದುವು.

ವೃದ್ಧನ ಮನೆಮಟಗಳೆಲ್ಲವೂ ಪರಾಧೀನವಾದುವು. ಪುಸ್ತಕ ಮೊದಲಾದ ಗೃಹಸಾಮಗ್ರಿಗಳೆಲ್ಲವೂ ಅನ್ಯಾಕ್ರಾಂತವಾದುವು. ರಂಗರಾಜನಿಗೆ ಉಟ್ಟ ಬಟ್ಟೆಯಿಂದ ಹೊರಹೊರಡುವುದು ಹೊರತಾಗಿ ಮತ್ತೇನೂ ಉಳಿಯಲಿಲ್ಲ. ರಂಗರಾಜನು ಇದಕ್ಕಾಗಿ ಕೊಂಚವೂ ವ್ಯಸನಪಡದೆ ಮನೆಯನ್ನು ತ್ಯಾಗ ಮಾಡಿ ಬೀದಿಗೆ ಬಂದನು. ಆ ಗ್ರಾಮದ ಉದಾರ ಮಹಾಶಯರಲ್ಲಿ ಕೆಲವರು ರಂಗರಾಜನನ್ನು ತಮ್ಮ ಮನೆಗ ಕರೆದುಕೊಂಡು ಹೋಗುವುದಕ್ಕೆ ಯತ್ನ ಮಾಡಿದರು. ಮತ್ತೆ ಕೆಲವರು ರಂಗರಾಜನಿಗೆ ಒಂದು ಉದ್ಯೋಗವನ್ನು ಕಲ್ಪಿಸಿಕೊಡುವುದಾಗಿ ಮಾತ ಕೊಟ್ಟರು. ಇನ್ನೂ ಕೆಲವರು ರಂಗರಾಜನನ್ನು

ಆ ಗ್ರಾಮದಲ್ಲಿಯೇ ಪಾಠಶಾಲೋಪಾಧ್ಯಾಯನನ್ನಾಗಿ ಮಾಡಿಟ್ಟುಕೊಳ್ಳಬೇಕೆಂದು ಪ್ರಯತ್ನಪಟ್ಟರು. ಆದರೆ ರಂಗರಾಜನು ಜನರ ಪರೋಪಕಾರ ಸ್ವಭಾವಕ್ಕೆ ಸಂತೋಷಪಟ್ಟವನಾಗಿ ರಾತ್ರಿಯಾದ ಕೂಡಲೆ ಮಾಯವಾಗಿಬಿಟ್ಟನು. ಆತನು ಪಿತೃವಾಕ್ಯಪರಿಪಾಲನೆಗಾಗಿಯೇ ರಾಜನಗರಕ್ಕೆ ಹೋಗುವುದಾಗಿ ಸಂಕಲ್ಪಿಸಿ ಪ್ರಯಾಣ ಬಳೆಯಿಸಿದನು.

ದೊಡ್ಡಪಟ್ಟಣವನ್ನು ಕುರಿತು ತೆರಳುವ ಕಾಲದಲ್ಲಿ ರಂಗರಾಜನ ಕೈಯಲ್ಲಿ ಒಂದು ಕಾಸೂ ಇಲ್ಲ, ತಿನ್ನುವುದಕ್ಕೆ ಒಂದು ಹಿಡಿಯ ಅನ್ನವೂ ಇಲ್ಲ. ಹೀಗಿದ್ದರೂ ಆತನು ದೇವರ ಮೇಲೆ ಭಾರ ಹಾಕಿ ಕಾಲ್ನಡೆಯಿಂದ ದೂರ ದೇಶಕ್ಕೆ ತೆರಳಿದನು. ಯಾಚಿಸುವುದು ಅವನ ಸ್ವಭಾವಕ್ಕೆ ಬಂದುದಲ್ಲ, ಕೊಟ್ಟುದನ್ನು ತೆಗೆದುಕೊಳ್ಳುವಷ್ಟು ಸಹನೆಯೂ ಅವನಿಗಿರಲಿಲ್ಲ. ಇಂಥವನು ಕಷ್ಟಕ್ಕೆ ಸಿಕ್ಕದೆ ಮತ್ತೇನಾಗಬೇಕು ? ಅದು ಕಾರಣವೇ ರಂಗರಾಜನು ಮೊದಲನೆಯ ಅಧ್ಯಾಯದಲ್ಲಿ ನಿರೂಪಿಸಿದಂತೆ ಹೊಟ್ಟೆಗಿಲ್ಲದೆ ಕಂಗೆಟ್ಟು ಬೀದಿಯ ಬಿಕಾರಿಯಂತೆ ಬೀದಿಯ ಅಂಚಿನಲ್ಲಿ ಜ್ಞಾನತಪ್ಪಿ ಬಿದ್ದನು. ವಿಲಾಸಿನಿಯು ಆಗ ಉಪಚರಿಸದೇ ಹೋಗಿದ್ದರೆ, ರಂಗರಾಜನೂ ದೇವರಾಜನಂತೆಯೇ ಸ್ವಾಮಿ ಪಾದಾರವಿಂದವನ್ನು ಸೇರಿಬಿಡುತ್ತಿದ್ದನು. ಅದೃಷ್ಟವು ಚೆನ್ನಾಗಿರುವುದಾದರೆ, ಮಾನವನು ಎಷ್ಟು ಹರಮಾಡಿದರೂ ತಳ್ಳಿಹೋಗುವುದು.

ರಂಗರಾಜನು ಬಲಾತ್ಕಾರದಿಂದ ಮಾಲತಿಯು ಕೊಟ್ಟ ರೊಟ್ಟಿಯನ್ನು ತೆಗೆದುಕೊಂಡು ಮುಂದಕ್ಕೆ ಪ್ರಯಾಣ ಬಳೆಯಿಸಿದನು. ಮರುದಿನ ರಂಗರಾಜನು ಮಾಲತಿಯ ರೊಟ್ಟಿಯನ್ನು ತಿಂದು ರಾತ್ರಿಯ ಸಮಯಕ್ಕೆ ಸರಿಯಾಗಿ ರಾಜನಗರದ ಬಳಿಗೈತಂದನು.

ರಾಜನಗರದ ದೀಪಮಾಲೆಗಳು ಭೂಮಿಗಿಳಿದ ನಕ್ಷತ್ರಗಳೋ ಎಂಬಂತೆ ಪ್ರಕಾಶಿಸುತ್ತಿದ್ದುವು. ರಂಗರಾಜನು ಈ ಸೊಬಗನ್ನು ನೋಡಿ ಆನಂದಿಸಿ ಮಹಾ ಪಟ್ಟಣದಲ್ಲಿ ಎಲ್ಲಿಗೆ ಹೋಗಬೇಕೆಂಬುದನ್ನು ಚಿಂತಿಸುತ್ತಾ ಕೊಂಚ ಹೊತ್ತು ಹಾಗೆಯೇ ನಿಂತುಕೊಂಡನು. ಇಷ್ಟರಲ್ಲಿ ಈತನ ಬೆನ್ನಿನ ಮೇಲೆ ರಪ್ಪನೆ ಬಲವಾದ ಪೆಟ್ಟು ಬಿದ್ದು ಈತನನ್ನು ನೆಲಕ್ಕುರುಳಿಸಿತು. ಈತನು ಚೇತರಿಸಿಕೊಂಡು ಎದ್ದು ಹಿಂದಿರುಗಿ ನೋಡಲಾಗಿ, ಇಬ್ಬರು ತುಂಡಾಡಿಗರಾದ ಹುಡುಗರು ರಂಗರಾಜನ ದುರವಸ್ಥೆಯನ್ನು ನೋಡಿ ಗೊಳ್ಳೆಂದು ನಗುತ್ತಿದ್ದರು. ರಂಗರಾಜನು ಇದಕ್ಕೆ ಕಾರಣವೇನೆಂಬುದನ್ನು ವಿಚಾರಮಾಡು

ವುದಕ್ಕೆ ಮೊದಲು ಒಂದೇ ಉಸಿರಿನಲ್ಲಿ ನಗುತ್ತಿದ್ದ ದೊಡ್ಡ ಹುಡುಗನ ಮೇಲೆ ನುಗ್ಗಿ ಅವನನ್ನು ಹಿಡಿದಪ್ಪಳಿಸಿ ನೆಲದ ಮೇಲೆ ಕೆಡಹಿದನು. ಇದನ್ನು ನೋಡಿದ ಕೂಡಲೆ ಮತ್ತೊಬ್ಬನು ಕಾಲಿಗೆ ಬುದ್ಧಿ ಹೇಳಿಬಿಟ್ಟನು. ಇದೆಲ್ಲವನ್ನೂ ಕಣ್ಣಾರೆ ನೋಡುತ್ತಿದ್ದ ಗ್ರಾಮರಕ್ಷಕನೊಬ್ಬನು ಹತ್ತಿರಕ್ಕೆ ಬಾರದೇ ಹೋಗಿದ್ದರೆ ನೂರಾರು ಹುಡುಗರು ಸೇರಿಕೊಂಡು ರಂಗರಾಜನನ್ನು ನಗರೇಶ್ವರನಿಗೆ ಬಲಿಯಾಗಿ ಕೊಟ್ಟುಬಿಡುತ್ತಿದ್ದರು.

ಗ್ರಾಮರಕ್ಷಕನು ರಂಗರಾಜನನ್ನು ನೋಡಿ—ಮಗು ! ಈ ಹುಡುಗರು ಮಹಾ ದುಷ್ಟರು. ನೀನು ಒಂದು ಕ್ಷಣಕಾಲವೂ ಇಲ್ಲಿ ನಿಲ್ಲದೆ ಎಲ್ಲಿಗಾದರೂ ಹೊರಟು ಹೋಗು, ಎಂದು ತಿಳಿಸಿದನು.

ರಂಗರಾಜ—ಅಯ್ಯಾ ! ನಾನು ಈ ದುಷ್ಟರಿಗೆ ಅಂಜತಕ್ಕವನಲ್ಲ. ಎಷ್ಟು ಮಂದಿ ಹುಡುಗರು ಬೇಕಾದರೂ ಬರಗಿ; ಅವರೆಲ್ಲರಿಗೂ ಸರಿಯಾಗಿ ಬುದ್ಧಿಯನ್ನೇ ಕಲಿಸಿಬಿಡುವೆನು.

ಗ್ರಾಮರಕ್ಷಕ—ಮಗು ! ನೀನು ಒಳ್ಳೆಯ ಹುಡುಗನಾಗಿ ಕಾಣಿಸಿಕೊಳ್ಳುವೆ, ಹುಡುಗರು ಜೇನು ಹುಳುಗಳ ಹಾಗೆ ಮುತ್ತಿದರೆ, ನಿನಗೆ ತೊಂದರೆಯಾದೀತು. ನನ್ನ ಮಾತಿನಂತೆ ಬೇಗನೆ ಎಲ್ಲಿಗಾದರೂ ಓಡಿ ಹೋಗು.

ರಂಗ—ಅವರೆಲ್ಲರನ್ನೂ ನಾನು ತಿಗಣೆಯಂತೆ ಹೊಸಕಿಬಿಡುವೆನು. ಈ ಅತ್ಯಾಚಾರವನ್ನು ಇಲ್ಲಿ ಆರೂ ಕೇಳುವವರಿಲ್ಲವೇ ?

ಗ್ರಾಮ—ಎಲಾ ಹುಡುಗ ! ಅವರು ಮಾಡಿದ ತಪ್ಪಿಗೆ ನೀನು ಅವರಿಗೆ ಸರಿಯಾಗಿ ದಂಡಿಸಿದೆ. ಇನ್ನು ನೀನು ಇಲ್ಲಿರುವುದು ತರವಲ್ಲ. ನಿನ್ನನ್ನು ನೋಡಿದರೆ, ಕಾಲಕೆರೆದು ಜಗಳಕ್ಕೆ ನಿಲ್ಲುವಂತಿದೆ. ನೀನು ಒಳ್ಳೆಯ ಮಾತಿನಿಂದ ಹೊರಡು, ಇಲ್ಲವಾದರೆ ನಾನು ಅಧಿಕಾರವನ್ನು ತೋರಿಸಬೇಕಾಗುವುದು.

ರಂಗರಾಜನು ಜಗಳಕ್ಕಾಗಿ ಬಂದವನಲ್ಲವಾದುದರಿಂದ, ಗ್ರಾಮರಕ್ಷಕನ ಅಪ್ಪಣೆಯಂತೆ ಮುಂದಕ್ಕೆ ತೆರಳಿದನು. ಆತನು ಅಲ್ಲಿಂದ ಒಂದು ಮೂಲೆ ತಿರುಗಿ ಮತ್ತೊಂದು ಬೀದಿಗೆ ಬರುವಷ್ಟರೊಳಗಾಗಿ ಹುಡುಗರ ಗುಂಪು ಬೆನ್ನಟ್ಟಿ ಬಂದಿತು. ರಂಗರಾಜನು ಹೆದರದೆ ತನ್ನ ಸಹಜವಾದ ನಡಗೆಯಿಂದ ಹೋಗುತ್ತಿದ್ದನು. ಹುಡುಗನೊಬ್ಬನು ಗುಂಪಿನಿಂದ ಮುಂದೆ

ಬಂದು ರಂಗರಾಜನ ಕಾಲಿಗೆ ತೊಡರು ಕೊಟ್ಟನು. ರಂಗರಾಜನು ಮುಗ್ಗರಿಸಿದನು. ಉಳಿದ ಹುಡುಗರೆಲ್ಲರೂ ಕೈಗಳನ್ನು ತಟ್ಟುತ್ತಾ ಸುತ್ತಲೂ ಆವರಿಸಿಕೊಂಡು ನಿಂತರು. ಎದೆಗುಂದಿದರೆ ಕೆಲಸವು ಕಿಡುವುದೆಂದು ತಿಳಿದು ರಂಗರಾಜನು ವೀರಾವೇಶದಿಂದ ಸಿಂಹದಂತೆ ಗರ್ಜಿಸುತ್ತಾ ಕೈಗೆ ಸಿಕ್ಕಿದವರನ್ನು ಅಪ್ಪಳಿಸುತ್ತಲೂ, ಕಾಲಿಗೆ ಸಿಕ್ಕಿದವರನ್ನು ಬಲವಾಗಿ ಒದೆಯುತ್ತಲೂ ಆತ್ಮಸಂರಕ್ಷಣೆಯನ್ನುಂಟುಮಾಡತೊಡಗಿದನು. ಕೆಟ್ಟಹುಡುಗರು ಇದಾವುದನ್ನೂ ಲೆಕ್ಕಿಸದೆ ಮತ್ತೆ ರಂಗರಾಜನನ್ನು ಆಕ್ರಮಿಸಿದರು. ಇಷ್ಟು ಹೊತ್ತಿಗೆ ಸರಿಯಾಗಿ ಅಸಹಾಯನಾಗಿ ಹೋರಾಡುತ್ತಿದ್ದ ರಂಗರಾಜನಿಗೆ ದೇವರೇ ಸಹಾಯನಾಗಿ ಬಂದನೋ ಎಂಬಂತೆ ಮತ್ತೊಬ್ಬ ಅಷ್ಟೇ ವಯಸ್ಸಿನ ಯುವಕನು ಮತ್ತೊಂದು ಕಡೆಯಿಂದ ನುಗ್ಗಿಬಂದು ಕಾಳದುಪ್ರನಂತೆ ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತಾ ಪೋಲೀಹುಡುಗರನ್ನು ಕಣ್ಣು ಮೋರೆ ನೋಡದೆ ಅಪ್ಪಳಿಸುತ್ತಾ ಬಂದನು. ರಂಗರಾಜನು ತನಗೊಬ್ಬ ಜತೆಗಾರನು ದೊರೆತುದಕ್ಕಾಗಿ ಮೈಯುಬ್ಬಿದವನಾಗಿ ಇಮ್ಮಡಿಸಿದ ಶಕ್ತಿಯಿಂದ ನಾಯಿಗಳನ್ನು ಹೊಡೆದಟ್ಟುವಂತೆ ಎರಡುಕೈಗಳಿಂದಲೂ ಹೊಡೆಯಲಾರಂಭಿಸಿದನು. ಇಷ್ಟಾದರೂ ಕದನವು ಕಡಮೆಯಾಗುವಂತೆ ಕಂಡುಬರಲಿಲ್ಲ. ಈ ಕೋಲಾಹಲವು ಕ್ಷಣಕ್ಷಣಕ್ಕೆ ಹೆಚ್ಚುತ್ತಿರುವುದನ್ನು ಕೇಳಿ ಗ್ರಾಮರಕ್ಷಕನೊಬ್ಬನು ತಟ್ಟನೆ ಅಲ್ಲಿಗೆ ಬಂದು ರಂಗರಾಜನನ್ನೂ ಅವನ ಹೊಸ ಸ್ನೇಹಿತನನ್ನೂ ಹಿಡಿದುಕೊಂಡನು. ಇವರಿಬ್ಬರೂ ಸುಮ್ಮನಾಗಲು, ಅಧಿಕಾರಿಯು ಇವರನ್ನು ಅಧಿಕಾರಮಂದಿರಕ್ಕೆ ಕರದುಕೊಂಡು ಹೋಗಿ, ಹುಡುಗರನ್ನು ನಿಷ್ಕಾರಣವಾಗಿ ಹೊಡೆಯುತ್ತಿದ್ದರೆಂಬ ಅಪರಾಧವನ್ನು ಹೊರಿಸಿ, ಅವರನ್ನು ಕಾರಾಗೃಹದಲ್ಲಿ ಬಂದಿಗಳನ್ನಾಗಿ ಮಾಡಿದನು. ರಂಗರಾಜನು ತನಗೆ ದಂಡನೆಯಾದುದಕ್ಕಾಗಿ ವ್ಯಸನವಡದಿದ್ದರೂ ತನಗಾಗಿ ತನ್ನ ಮಿತ್ರನಿಗೂ ದಂಡನೆಯಾಯಿತೆಂದು ಅತಿಯಾಗಿ ಕತಿಗೊಂಡನು. ಅಧಿಕಾರಿಯು ಇಬ್ಬರು ಹುಡುಗರನ್ನು ಬೇರೆಬೇರೆಯ ಕೋಣೆಗಳಲ್ಲಿ ನಿರ್ಬಂಧಿಸಿ ಹೊರಟುಹೋದನು. ಬಳಿಕ ಅಲ್ಲಿ ಮತ್ತಾರೂ ಇಲ್ಲದಿರುವುದನ್ನು ಅರಿತುಕೊಂಡು ಮಿತ್ರನು ರಂಗರಾಜನನ್ನು ಗಟ್ಟಿಯಾಗಿ ಮಾತನಾಡಿಸಿದನು.

ಮಿತ್ರ—ಮಿತ್ರನೇ ! ಇರುವೆಯಾ ?

ರಂಗ—ಇರುವೆನಯ್ಯಾ.

ಮಿತ್ರ—ನಮ್ಮಿಬ್ಬರಿಗೂ ಸಮಾನವಾದ ದಂಡನೆಯಾಯಿತಲ್ಲವೇ ?

ರಂಗ—ಅಹುದು.

ಮಿತ್ರ—ಇದಕ್ಕಾಗಿ ಕೊರಗಬೇಕಾದುದಿಲ್ಲ. ಬೆಳಗಾದ ಕೂಡಲೆ ನಮಗೆ ಬಿಡುಗಡೆಯಾಗುವುದು. ಈ ಶೀತದ ರಾತ್ರಿಯಲ್ಲಿ ನಮಗೆ ನಿರ್ಬಂಧವಾದುದು ಒಳ್ಳೆಯದೇ ಆಯಿತು.

ರಂಗ—ನಿನ್ನ ತಂದೆತಾಯಿಗಳೇನೆಂದಾರು ?

ಮಿತ್ರ— ನನ್ನ ಮಾತಾಪಿತೃಗಳೇ ?

ರಂಗ—ಅಹುದು, ಅವರೇ.

ಮಿತ್ರ—ಅವರಿಗೆ ಗೊತ್ತಾಗುವುದಕ್ಕೆ ಬಹುಕಾಲ ಹಿಡಿಯುವುದು.

ರಂಗ—ಹಾಗೆಂದರೇನು ?

ಮಿತ್ರ—ಅವರು ಇಲ್ಲಿಗೆ ಇನ್ನೂರು ಮೈಲಿಗಳ ದೂರದಲ್ಲಿರುವರು. ಆದುದರಿಂದ ನನ್ನ ವಿಷಯವು ಅವರಿಗೆ ತಿಳಿಯಲು ಕಾರಣವಿರಲಾರದು.

ರಂಗರಾಜನು ತನ್ನ ಮಿತ್ರನ ನಿರ್ಭಯವಾದ ಮಾತುಗಳನ್ನು ಕೇಳಿ— ಅಯ್ಯಾ! ನನಗೋಸ್ಕರ ನಿನಗೆ ತೊಂದರೆಯಾದುದಕ್ಕಾಗಿ ನಾವು ವ್ಯಸನಪಡಬೇಕಾಗಿದೆ, ಎಂದನು.

ಮಿತ್ರ—ನೀನು ವ್ಯಸನಪಡಬೇಕಾದುದಿಲ್ಲ.

ರಂಗ—ನಾನು ವ್ಯಸನಪಡಬೇಕಾದುದಿಲ್ಲವೇ ?

ಮಿತ್ರ—ಇಲ್ಲ.

ರಂಗ—ಕಾರಣವೇನು ?

ಮಿತ್ರ—ನನಗೇ ವ್ಯಸನವಾಗದಿರುವಾಗ, ನಿನಗೆ ವ್ಯಸನವೇಕೆ ? ನನಗೇನೋ ಅನುಕೂಲತೆಯಾಯಿತು. ಚಳಿಗಾಳಿಯ ಬಾಧೆಯಿಲ್ಲದ ಸ್ಥಳದಲ್ಲಿ ಒಂದು ರಾತ್ರಿಯ ಮಟ್ಟಿಗಾದರೂ ವಿಶ್ರಾಂತಿಯನ್ನು ಹೊಂದುವಂತಾದುದಕ್ಕಾಗಿ ನಾನು ಸಂತೋಷಪಡುವೆನು. ಆದರೆ ನಿನಗೆ ಹೀಗಾದುದಕ್ಕಾಗಿ ನಾನು ಚಿಂತಿಸುತ್ತಿರುವೆನು.

ರಂಗ—ನನಗಾಗಿ ಚಿಂತಿಸುವೆಯಾ ?

ಮಿತ್ರ—ಅಹುದು, ನಿನಗಾಗಿ ಚಿಂತಿಸುವೆನು.

ರಂಗ—ಹಾಗಾದರೆ, ನಾನೂ ನಿನ್ನಂತೆಯೇ ಸುಖಿಯು.

ಮಿತ್ರ—ನಿನಗೆ ಮನೆಯಿಲ್ಲವೇ ?

ರಂಗ—ಇಲ್ಲ.

ಮಿತ್ರ—ಕಾಸು ?

ರಂಗ—ಅದೂ ಇಲ್ಲ.

ಮಿತ್ರ—ಭಗವಂತ ! ನಾವಿಬ್ಬರೂ ಜೀವನಪಥದಲ್ಲಿ ಸಮಾನರಾದ ಪಥಿಕರು. ಅಯ್ಯಾ ಮಿತ್ರನೇ ! ನೀನು ಎಲ್ಲಿಂದ ಬಂದೆ ?

ರಂಗ—ದೂರದ ಗ್ರಾಮದಿಂದ.

ಮಿತ್ರ—ಹಾಗೆಯೇ ?

ರಂಗ—ಅಹುದು.

ಮಿತ್ರ—ನಿನ್ನಂತೆಯೇ ನಾನು. ನೀನು ಇಲ್ಲಿಗೆ ಬಂದುದಾವಾಗ ?

ರಂಗ—ನಾನು ಇಲ್ಲಿಗೆ ಬಂದು ಒಂದೆರಡು ಗಂಟೆಗಳ ಕಾಲವೂ ಆಗಿಲ್ಲ.

ಮಿತ್ರ—ನಾನು ಇಲ್ಲಿಗೆ ಬಂದು ಒಂದು ವಾರವಾಗಿರುವುದು; ಆದರೂ ಕೈಯಲ್ಲಿ ಕಾಸಿಲ್ಲ, ನಿಲ್ಲುವುದಕ್ಕೆ ನೆರಳೂ ಇಲ್ಲ. ನನಗೆ ಈ ರಾತ್ರಿ ಇಂತಹ ವಿಶ್ರಾಂತಿಸ್ಥಾನವು ದೊರೆತುದು ನನ್ನ ಪೂರ್ವಪುಣ್ಯೋದಯವೇ ಸರಿ. ನಾನು ಇಲ್ಲಿಗೆ ಬಂದಾಗಿನಿಂದಲೂ ಇಂತಹ ಆನಂದವನ್ನು ಕಂಡವನೇ ಅಲ್ಲ.

ರಂಗ—ನನಗೂ ನಿನ್ನಂತೆಯೇ ಆನಂದವಾದರೂ, ಅಪಮಾನವು ಬಾಧಿಸುತ್ತಿರುವುದು.

ಮಿತ್ರ—ಅಪಮಾನಕ್ಕೆ ಕಾರಣವಾದರೂ ಏನು ?

ರಂಗ—ಕಾರಾಗೃಹವಾಸವು ಅಪಮಾನವಲ್ಲವೇ ? ನೀನು ಹೇಳು ವುದು ಆಶ್ಚರ್ಯಕರವಾಗಿರುವುದು.

ಮಿತ್ರ—ತಪ್ಪುಮಾಡಿದವರಿಗೆ ಅಪಮಾನವು. ನಾವು ತಪ್ಪುಮಾಡಿರು ವುದಾದರೂ ಏನು ? ನೀನು ಆತ್ಮರಕ್ಷಣೆಗಾಗಿ ಯತ್ನಮಾಡುತಿದ್ದುದನ್ನು ಕಂಡು, ನಾನು ನಿನ್ನ ರಕ್ಷಣೆಗಾಗಿ ಬಂದೆನು. ನ್ಯಾಯವು ಎಲ್ಲಿಗೆ ಹೋಗಿ ರುವುದು ?

ರಂಗ—ಹಾಗಾದರೆ ನಮಗೆ ಈ ಶಿಕ್ಷೆಯೇಕೆ ?

ಮಿತ್ರ—ನಾವು ಜಗಳಕಾದೆವೆಂದು ನಮ್ಮ ಮೇಲೆ ಅಪರಾಧವನ್ನು ಹೊರಿಸಿರುವರು.

ರಂಗ—ಇದರಿಂದ ತೊಂದರೆಯಲ್ಲವೇ ?

ಮಿತ್ರ—ತೊಂದರೆಯಾಗುವುದಕ್ಕೆ ನಾವು ಮಾಡಿದ ಮಹಾಪರಾಧವು ಅಷ್ಟರಲ್ಲಿಯೇ ಇರುವುದು.

ರಂಗ—ನೀನು ಇಲ್ಲಿಗೆ ಬಂದುದೇಕೆ ?

ಮಿತ್ರ—ಸಂಪತ್ತನ್ನು ಸಂಪಾದಿಸುವುದಕ್ಕೆ.

ರಂಗ—ನಾನೂ ಅದಕ್ಕಾಗಿಯೇ ಬಂದುದು.

ಮಿತ್ರ—ಒಳ್ಳೆಯದೇ ಆಯಿತು. ಈಗ ನಿನ್ನ ಹತ್ತಿರ ಎಷ್ಟು ಬಂಡವಾಳವಿರುವುದು ?

ರಂಗ—ನಾನೇ ನನಗೆ ಬಂಡವಾಳವು.

ಮಿತ್ರ—ನನ್ನ ಬಂಡವಾಳವೂ ಅಷ್ಟೇ ಆಗಿರುವುದು. ಹಾಗಾದರೆ ಸರಿಹೋಯಿತು

ರಂಗ—ಸರಿಹೋಯಿತೇನು ?

ಮಿತ್ರ—ಅನೇಕ ಮಹನೀಯರು ಮೊದಲಿನಲ್ಲಿ ನಮ್ಮಂತೆಯೇ ನಿರ್ಗತಿಕರಾಗಿದ್ದರು.

ರಂಗ—ನೀನು ಏನು ಕೆಲಸ ಮಾಡಬೇಕೆಂದಿರುವೆ ?

ಮಿತ್ರ—ಆವ ಕೆಲಸವಾದರೇನು ?

ರಂಗ—ಊಟಕ್ಕೆ ಮಾರ್ಗವೇನು ?

ಮಿತ್ರ—ನಾಳೆಯ ದಿನ ಕೈಗೆ ಸಿಕ್ಕಿದ ಕೆಲಸವನ್ನು ಮಾಡಿ ಬಂದ ಕಾಸನ್ನು ಹಂಚಿಕೊಂಡು ಭೋಜನ ಮಾಡುವ. ನಾವಿಬ್ಬರೂ ಒಂದೇ ಹಡಗನ್ನೇರಿರುವೆವು. ಅದುಕಾರಣ ನಾವಿಬ್ಬರೂ ಸುಖದುಃಖಗಳಲ್ಲಿ ಸಮಭಾಗಿಗಳು.

ರಂಗ—ಮಿತ್ರನೇ ! ನೀನು ಈ ಕಾರಾವಾಸದ ಮಹಿಮೆಯಿಂದ ಆಡಿದ ಮಾತಾಗಿದೆ.

ಮಿತ್ರ—ಆಗಬಾರದೇಕೆ ?

ರಂಗ—ನನ್ನಿಂದ ನೀನು ಇಲ್ಲಿಗೆ ಬರಬೇಕಾಯಿತು.

ಮಿತ್ರ—ನಾನು ಇದನ್ನು ಲೆಕ್ಕಿಸತಕ್ಕವನಲ್ಲ. ನನಗೆ ಇಲ್ಲಿಗೆ ಬಂದುದು ಸಂತೋಷವೇ ಆಯಿತು. ಈ ರಾತ್ರಿಯನ್ನು ಸುಖವಾಗಿ ಕಳೆದು, ಬೆಳಗಾದ ಕೂಡಲೆ ಜೀವಿಕೆಗಾಗಿ ಹೊರಬೀಳುವ. ಹುಟ್ಟಿಸಿದ ದೇವರು ಕೈಬಿಟ್ಟಾನೆ !

ಅಪರಿಚಿತನಾದ ಮಿತ್ರನು ಹೀಗೆ ಹೇಳಿ ಆನಂದದಿಂದ ಗಟ್ಟಿಯಾಗಿ ನಕ್ಕನು. ರಂಗರಾಜನು ಇದನ್ನು ಕೇಳಿ—ಅಯ್ಯಾ! ನೀನು ಸಂತೋಷ ಪ್ರಕೃತಿಯೆಂದು ತೋರಿಬರುತ್ತಿರುವುದು, ಎಂದನು.

ಮಿತ್ರ— ಅಲ್ಲದೇ ಏನು ? ನೀನೋ ?

ರಂಗ—ನಾನೂ.

ಮಿತ್ರ—ಹಾಗಾದರೆ ಸರಿ, ನಾವಿಬ್ಬರೂ ಎಡೆಬಿಡದೆ ಸೇರಿಕೊಂಡು ನಮ್ಮ ನಮ್ಮ ಸುಖದುಃಖಗಳನ್ನು ಹಂಚಿಕೊಳ್ಳುವ. ನಮಗೆ ಈ ಜನ್ಮದಲ್ಲಿ ಸಮರಾರು ? ನಾನು ಬೆಳಗಾಗುವುದನ್ನೇ ನಿರೀಕ್ಷಿಸುತ್ತಿರುವೆನು.

ರಂಗ---ಮಿತ್ರನೇ ! ನಿನ್ನ ಹೆಸರೇನು ?

ಮಿತ್ರ—ನನ್ನ ಹೆಸರು ಶರತ್ಕುಮಾರ.

ರಂಗ—ನನ್ನ ಹೆಸರು ರಂಗರಾಜ.

ಶರತ್—ರಂಗರಾಜ ! ದೈವಯೋಗದಿಂದ ಲಭಿಸಿರುವ ಈ ಸ್ಥಳದಲ್ಲಿ ನಿದ್ರೆಯ ಸುಖವನ್ನು ಎಂದಿಗೂ ಕಳೆದುಕೊಳ್ಳಬೇಡ, ಕಂಡೆಯಾ ? ನಾಳೆಯಿಂದ ನಾವು ಏನೇನು ಕಷ್ಟಗಳನ್ನು ಅನುಭವಿಸಬೇಕೋ ಬಲ್ಲವರಾರು ?

ರಂಗ—ನಾಳೆಯ ದಿನವೇ ನ್ಯಾಯಾಧಿಪತಿಯು ನಮ್ಮನ್ನು ಬಿಡುಗಡೆ ಮಾಡುವನೇ ?

ಶರತ್—ನಮ್ಮನ್ನು ಬಿಡದೇ ಕಟ್ಟಿಹಾಕಿಕೊಂಡು ಅತನೇನ ಮಾಡಿಯಾನು ?

ರಂಗ—ಇದು ನಿನಗೆ ಹೇಗೆ ಗೊತ್ತು?

ಶರತ್—ನಾನೊಂದು ದಿನ ನ್ಯಾಯಸ್ಥಾನಕ್ಕೆ ನೋಡುವುದಕ್ಕಾಗಿ ಹೋಗಿದ್ದೆನು. ಅಲ್ಲಿ ನನಗೆ ಇದೆಲ್ಲವೂ ಗೊತ್ತಾಯಿತು.

ರಂಗ—ಹಾಗಾದರೆ ಗ್ರಾಮರಕ್ಷಕರು ಜನರಿಗೆ ಅದೇಕೆ ತೊಂದರೆ ಮಾಡುವರು ?

ಶರತ್-- ಅದು ಅವರ ಕೆಲಸವೇ ಆಗಿರುವುದು.

ರಂಗ—ಶರತ್ ! ನಿನಗೆ ಊಟವಾಗಿದೆಯೋ ?

ಶರತ್—ಆಗಿದೆ. ನಿನಗೋ ?

ರಂಗ—ನನಗೆ ಊಟವಿಲ್ಲದೆ ಕಣ್ಣಿನಲ್ಲಿ ಪ್ರಾಣವೇ ಹಾರಿಹೋಗುತ್ತಿರುವುದು.

ಶರತ್—ಈಗ ಯತ್ನವಿಲ್ಲ; ಬೆಳಗಾಗುವ ವರೆಗೂ ಹೇಗಾದರೂ ಸಹಿಸಿಕೊಂಡಿರು.

ರಂಗ—ಸಹಿಸಲೇ ಬೇಕು, ಮಾಡುವುದೇನು?

ಶರತ್—ನಾವಿಬ್ಬರೂ ಆರೋಗದೃಢಕಾಯರಾದ ಯುವಕರು. ನಾವಿಬ್ಬರೂ ಬಲವಾಗಿಯೇ ಇರುವೆವು.

ರಂಗ—ಶರತ್! ಇದೇನಚ್ಚರಿ! ಇಲ್ಲಿನ ಹುಡುಗರು ಇಷ್ಟು ಪಶುಗಳಾಗಿ ವರ್ತಿಸುವರು? ಇವರಿಗೆ ಹೇಳುವವರೂ ಕೇಳುವವರೂ ಯಾರೂ ಇಲ್ಲವೇ ಹೇಗೆ?

ಶರತ್—ಹಳ್ಳಿಗಾಡಿನವರನ್ನು ಕಂಡರೆ, ಪಟ್ಟಣಿಗರಿಗೆ ಯಾವಾಗಲೂ ತಾತ್ಸಾರವೇ ಇರುವುದು. ಪಟ್ಟಣಗಳಲ್ಲಿ ಇಂತಹ ನಡೆವಳಿಗಳು ಆಗಿಂದಾಗ ನಡೆಯುತ್ತಲೇ ಇರುವುವು. ನೀನು ಹೊಸಬನಾದುದರಿಂದ ನಿನಗೆ ಆಶ್ಚರ್ಯವನ್ನುಂಟುಮಾಡಿರುವುವು.

ರಂಗ—ನಾವೇನೋ ಇಲ್ಲಿಗೆ ಬಂದುದಾಯಿತು. ಇಲ್ಲಿನ ನೀತಿರೀತಿಗಳನ್ನು ಅರಿತುಕೊಂಡೇ ಬಾಳಬೇಕು. ಕೆಡುವುದಕ್ಕೂ ಪಟ್ಟಣವು; ಬದುಕುವುದಕ್ಕೂ ಪಟ್ಟಣವು. ನಮ್ಮ ಅದೃಷ್ಟದಲ್ಲಿದ್ದಂತಾಗಲಿ.

---

## ನಾಲ್ಕನೆಯ ಅಧ್ಯಾಯ.

ರಂಗರಾಜನ ಪ್ರಥಮೋದ್ಯೋಗ. ವಿರಾಮವಿಲ್ಲದ ದಿವಸ. ನಿರಾಶ್ರಯರಾದ ಇಬ್ಬರು ಅನಾಥ ಬಾಲಕರ ಸಾಹಸಕಲಾಪ. ನಿರಾಧಾರದ ಆಧಾರ.

ಕಾರಾಗಾರದಲ್ಲಿ ಅರ್ಧರಾತ್ರದ ಸಮಯವಾಯಿತು. ಶರತ್ಕುಮಾರನು ನಿರಾತಂಕಭಾವದಿಂದ ಗಾಢನಿದ್ರೆಯಲ್ಲಿ ಮಗ್ನನಾದನು. ರಂಗರಾಜನು ಮಟ್ಟಿಗೆ ಬಗೆಬಗೆಯ ಚಿಂತೆಗೆ ಈಡಾಗಿ ನಿದ್ರೆಗೆ ದೂರನಾದನು. ಬದುಕಬೇಕೆಂದು ದೊಡ್ಡ ಪಟ್ಟಣವನ್ನು ನಂಬಿಕೊಂಡು ಬಂದುದಕ್ಕೆ ಪ್ರಾರಂಭದಲ್ಲಿಯೇ ಕಾರಾಗೃಹವಾಸವು ಲಭಿಸಿದ ಮೇಲೆ, ಮುಂದಣ ಪರಿಣಾಮವು ಹೇಗಾಗುವುದೋ ಎಂಬ ಚಿಂತೆಯು ಆತನ ಮನವನ್ನು ಆವರಿಸಿತಾದುದರಿಂದ, ಆತನಿಗೆ ನಿದ್ದೆ ಬಾರದೇ ಹೋಯಿತು. ರಂಗರಾಜನು ತನ್ನ ದುಶ್ಚಿಂತೆ

ಯನ್ನು ದೂರಮಾಡುವುದಕ್ಕೂ ಏನೇನೋ ಪ್ರಯತ್ನಮಾಡಿ ನೋಡಿದನು. ಆವುದರಿಂದಲೂ ಏನೂ ಪ್ರಯೋಜನವಾಗದಿರಲು, ರಂಗರಾಜನು ಕಟ್ಟ ಕಡೆಗೆ ಚಿಂತಿಸಿದನೇನೆಂದರೆ—

"ನನಗೆ ಅಪಮಾನವೆಂದರೇನು? ನಾನು ಮಾಡಿದ ಅಪರಾಧವಾದರೂ ಏನು? ಆತ್ಮರಕ್ಷಣೆಗಾಗಿ ದುಷ್ಟರಿಗೆ ದಂಡನೆ ಮಾಡಿದುದು ಅಪರಾಧವಾಯಿತೇ? ಇಲ್ಲ, ನಾನು ಅಂತರಾತ್ಮಸಾಕ್ಷಿಯಾಗಿಯೂ ಅಪರಾಧಿಯಲ್ಲ. ಅಧಿಕಾರಿಗಳು ದೇವಲೋಕದಿಂದ ಇಳಿದು ಬಂದವರಲ್ಲ. ಅವರೂ ನಮ್ಮಂತೆಯೇ ಮನುಷ್ಯರಾದುದರಿಂದ, ಅವರಿಗೆ ತತ್ತ್ವವೇನು ಗೊತ್ತಾದೀತು? ಅವರು ಅಧಿಕಾರದ ಮದದಿಂದ ಅನಾಥರನ್ನು ಹಿಂಸೆಪಡಿಸುವರು. ಇದನ್ನು ನಾವು ಅವಮಾನವೆಂದು ಸಂಕಟಪಡುತ್ತಾ ಕುಳಿತರೆ, ಲೋಕದ ವ್ಯಾಪಾರವು ನಡೆಯುವ ಬಗೆ ಹೇಗೆ? ಗುಣದೋಷಗಳನ್ನು ವಿವೇಚನೆ ಮಾಡತಕ್ಕ ದೇವನು ಬೇರೆಯಾಗಿರುವನು. ಆತನ ಸತ್ಯವಾದ ರಾಜ್ಯಭಾರದಲ್ಲಿ ಸರಿಯಾದ ನ್ಯಾಯವು ದೊರೆಯುವುದು. ಆದುದರಿಂದ ನಾವು ಆತನಿಗೆ ಹೆದರಿ ನಡೆಯಬೇಕು. ಮನುಷ್ಯಮಾತ್ರದವನಿಂದಾಗುವುದೇನು?"

ರಂಗರಾಜನು ಹೀಗೆ ಆಲೋಚಿಸುತ್ತಿರುವಲ್ಲಿ, ಕಣ್ಣಿಗೆ ಕೊಂಚ ನಿದ್ರೆಯು ಹತ್ತಿತು. ಈ ಸ್ವಲ್ಪ ನಿದ್ರೆಯಲ್ಲಿ ಸ್ವಪ್ನಸುಖವನ್ನು ಅನುಭವಿಸುತ್ತಿರುವಾಗ, ಶರತ್ಕುಮಾರನ ಧ್ವನಿಯನ್ನು ಕೇಳಿ ಎಚ್ಚೆತ್ತು ರಂಗರಾಜನು— ಶರತ್ಕುಮಾರಾ, ಎಂದನು.

ಶರತ್—ರಂಗರಾಜ! ಇರುವೆಯಷ್ಟೇ?

ರಂಗ—ಇಲ್ಲಿಯೇ ಇರುವೆನು.

ಶರತ್—ನಿದ್ರೆಮಾಡಿದೆಯಾ?

ರಂಗ—ಮಾಡಿದೆನು.

ಶರತ್—ನಾನಾದರೋ ಬಂದುದೆಲ್ಲಾ ಬರಲೆಂದು ನಿರ್ಭಯವಾಗಿ ನಿದ್ರೆ ಮಾಡಿಬಿಟ್ಟೆನು. ನಮ್ಮ ಕ್ಷೇಮಕ್ಕಾಗಿಯೇ ಈ ಸ್ಥಾನವು ದೊರೆಯಿತು. ನಮಗೆ ಆಶ್ರಯವು ದೊರೆಯದ ದಿನ ಇಲ್ಲಿಗೆ ಬರುವುದಕ್ಕೆ ತಕ್ಕ ಏರ್ಪಾಡು ಮಾಡಿಕೊಂಡಲ್ಲಿ, ನಾವು ಸುಖವಾಗಿ ನಿದ್ರೆಯನ್ನಾದರೂ ಮಾಡಬಹುದು. ಒಂದು ಕಾಸಿನ ವೆಚ್ಚವೂ ಇಲ್ಲದೆ ಹೆಚ್ಚಿನ ಸುಖವು ದೊರೆಯತಕ್ಕ ಈ ಸ್ಥಲ ಬಿಟ್ಟರೆ ಮತ್ತೊಂದು ದೊರೆಯಲಾರದು.

ರಂಗ—ಶರತ್! ನಿನ್ನಷ್ಟು ಧೈರ್ಯವು ನನಗಿಲ್ಲ. ನನಗೇನೋ ಭಯವೇ ಆಗುತ್ತಿರುವುದು.

ಶರತ್—ಕಾರಣ?

ರಂಗ—ನಮಗೆ ಇದರಿಂದ ಉತ್ತಾರಣೆಯಿಲ್ಲವೆಂದೇ ತೋರುತ್ತಿರುವುದು.

ಶರತ್—ಇಲ್ಲದುದನ್ನು ಚಿಂತಿಸುತ್ತಾ ಕೊರಗಬಾರದು.

ರಂಗ—ಶರತ್‌ಕುಮಾರ! ಹಿಂದೆ ಎಂದಾದರೊಂದು ದಿನ ಈ ಸುಖವನ್ನು ನೀನು ಅನುಭವಿಸಿದ್ದೆಯಾ?

ಶರತ್—ನಾನೆಂದೂ ಅನುಭವಿಸಿದವನಲ್ಲ ಈ ದಿನದ ನನ್ನ ಅವಸ್ಥೆಯನ್ನು ನೋಡಿದರೆ, ನನಗೆ ಹೀಗೆಲ್ಲಾ ತೋರಹತ್ತಿತು. ನಾವು ಇದನ್ನೇ ನಂಬಿಕೊಂಡು ಕುಳಿತರೆ, ನಾವು ಲೋಕದಲ್ಲಿ ಬದುಕಿ ಬಾಳಿ ಹೆಸರು ಹೇಳಿದಂತೆಯೇ ಸರಿ.

ರಂಗ—ಮಿತ್ರನೇ! ಮುಂದಿನ ಪರಿಣಾಮವೇನು?

ಶರತ್—ಪರಿಣಾಮವನ್ನು ಕೇಳುವೆಯಾ? ನಾಳೆಯ ದಿನ ನಾವು ನ್ಯಾಯಾಧಿಪತಿಯ ಮುಂಗಡೆಯಲ್ಲಿ ನಿಂತಕೂಡಲೆ, ನ್ಯಾಯಾಧಿಪತಿಯು ನಮಗಾಗಿ ಕೊಂಚಹೊತ್ತು ಉಪನ್ಯಾಸಮಾಡಿ ನಮ್ಮನ್ನು ಹೋಗೆಂದು ಕಳುಹಿಸಿಬಿಡುವನು. ಬಳಿಕ ನಮ್ಮ ಕೆಲಸವು ಅಪಾರವಾಗಿರುವುದು.

ರಂಗ—ಹಾಗೆಯೇ?

ಶರತ್—ಹಾಗೆಯೇ.

ರಂಗ—ಮಿತ್ರನೇ! ನಾಳೆ ನಾವು ಆವ ಕೆಲಸಮಾಡಿ ಹಣವನ್ನು ಸಂಪಾದಿಸಬೇಕಾಗುವುದು?

ಶರತ್—ಕಂಡೇ ಇದೆ ವೃತ್ತಪತ್ರಿಕೆಗಳನ್ನು ಮಾರಿ ಜೀವಿಸಬೇಕು.

ಈ ಮಾತನ್ನು ಕೇಳಿದ ಕೂಡಲೆ ರಂಗರಾಜನು ಬೆಚ್ಚಿ ಬೆದರಿದವನಾಗಿ ತನ್ನಲ್ಲಿ ತಾನು ಆಲೋಚಿಸಿಕೊಂಡನು—

“ಇದೇನು ನಾಚುಗೆ ಕೇಡು! ಬೀದಿಬೀದಿಗಳಲ್ಲಿ ಗಟ್ಟಿಯಾಗಿ ಅರಚಿಕೊಳ್ಳುತ್ತಾ ಕಂಡಕಂಡವರ ಇದಿರಿನಲ್ಲಿ ಪತ್ರಿಕೆಗಳನ್ನು ಹಿಡಿದು ಅವರ ಮುಖೋಲ್ಲಾಸವನ್ನುಮಾಡಿ ಜೀವಿಸುವ ಬಾಳು ಅದೆಂತಹ ಬಾಳು? ದೊಡ್ಡದೊಡ್ಡ ಮಳಿಗೆಗಳಲ್ಲಿ ಕೆಲಸಕ್ಕೆ ನಿಂತು ವ್ಯಾಪಾರದ ಮರ್ಮವನ್ನು ಅರಿತುಕೊಂಡು ಸ್ವತಂತ್ರವಾಗಿ ಬಾಳಬೇಕೆಂದು ನಾವು ಇಲ್ಲಿಗೆ ಬಂದೆನು. ಆದರೆ—”

ರಂಗರಾಜನ ಈ ಬಗೆಯ ಆಲೋಚನೆಯು ಮುಗಿಯುವುದರೊಳಗಾಗಿ ಕಾರಾಗೃಹದ ಬಾಗಿಲು ತೆರೆಯಲ್ಪಟ್ಟಿತು. ಆ ಕೂಡಲೆ ಗ್ರಾಮರಕ್ಷಾಧಿಕಾರಿಯು ಇಬ್ಬರನ್ನೂ ಮತ್ತೊಂದು ಕಡೆಗೆ ಕರೆದುಕೊಂಡು ಹೋಗಿ, ಅವರೊಡನೆ ಮಾತನಾಡತೊಡಗಿದನು.

ಗ್ರಾಮ—ಮಕ್ಕಳಿರಾ ! ನೀವು ವಾಸಮಾಡುವುದೆಲ್ಲಿ ?

ಶರತ್—ನನಗೆ ಮನೆಯಿಲ್ಲ.

ರಂಗ—ಈತನಂತೆಯೇ ನನಗೂ ಮನೆಯಿಲ್ಲ.

ಗ್ರಾಮ—ಹಾಗಾದರೆ ಈ ಚಳಿಯ ರಾತ್ರಿಯಲ್ಲಿ ನಿಮಗೆ ನಿರ್ಬಂಧಿಸಿದುದು ಒಳ್ಳೆಯದೇ ಆಯಿತೆಂದು ತೋರುವುದು. ನೀವು ನ್ಯಾಯಾಧಿಪತಿಯ ಬಳಿಗೆ ಹೋಗಬೇಕಾಗುವುದು.

ಗ್ರಾಮರಕ್ಷಾಧಿಕಾರಿಯು ಹೀಗೆ ಹೇಳಿ ಇಬ್ಬರನ್ನೂ ನ್ಯಾಯಸ್ಥಾನಕ್ಕೆ ಕರೆದುಕೊಂಡು ಹೋಗಿ ನ್ಯಾಯಾಧೀಶನ ಮುಂದೆ ನಿಲ್ಲಿಸಿದನು.

ನ್ಯಾಯಾಧಿಪತಿಯು ಹುಡುಗರನ್ನು ನೋಡಿ, ಅಧಿಕಾರಿಯನ್ನು ಕುರಿತು—ಅಪರಾಧವೇನು ? ಎಂದನು.

ಗ್ರಾಮ—ಧರ್ಮಾವತಾರ ! ಬೀದಿಯಲ್ಲಿ ಕಲಹವನ್ನು ಇವರಿಬ್ಬರೂ ಹೂಡಿದರು.

ನ್ಯಾಯಾ—(ಹುಡುಗರನ್ನು ನೋಡಿ) ನಿಮ್ಮ ಹೇಳಿಕೆಯೇನು? ಸತ್ಯವಾಗಿ ನುಡಿಯಿರಿ.

ಶರತ್— (ಮುಂದೆ ಬಂದು) ಧರ್ಮಾವತಾರ ! ಅನೇಕ ಬಾಲಕರು ನಿಷ್ಕಾರಣವಾಗಿ ನನ್ನ ಈ ಸ್ನೇಹಿತನನ್ನು ಆಕ್ರಮಣ ಮಾಡಿದರು. ಈತನು ಆತ್ಮಸಂರಕ್ಷಣೆಗಾಗಿ ಹೋರಾಡುತಿದ್ದುದನ್ನು ಕಂಡು ನಾನು ಈತನ ರಕ್ಷಣೆಗಾಗಿ ಬಂದು ನಿಂತೆನು.

ನ್ಯಾಯಾಧಿಪತಿಯು ಈ ಮಾತನ್ನು ಕೇಳಿದ ಬಳಿಕ ರಂಗರಾಜನ ಕಡೆಗೆ ತಿರುಗಿ—ಎಲಾ ! ನಿನ್ನ ವಿಚಾರವೇನು ? ಎಂದನು.

ರಂಗರಾಜನು ಅದಕ್ಕೆ ಪ್ರತ್ಯುತ್ತರವಾಗಿ ಹೇಳಿದುದು— "ಧರ್ಮಾವತಾರ ! ನನಗೆ ನಿನ್ನೆಯ ರಾತ್ರಿಯ ವೇಳೆಯಲ್ಲಿ ಈ ನಗರದ ಪ್ರಥಮದರ್ಶನವಾಯಿತು. ಇದು ನನಗೆ ಅಪರಿಚಿತವಾದ ಸ್ಥಳವಾದುದರಿಂದ, ಈ ಅವೇಳೆಯಲ್ಲಿ ಎಲ್ಲಿಗೆ ಹೋಗಬೇಕೆಂಬುದನ್ನು ನಾನು ಚಿಂತಿಸುತ್ತಾ ನಿಂತಿದ್ದೆನು. ಆಗ ತುಂಡಾಂಡಿಗನಾದ ಹುಡುಗನೊಬ್ಬನು ಹಿಂಗಡೆಯಿಂದ ಬಂದು ನನ್ನ

ಕತ್ತಿನ ಮೇಲೆ ಬಲವಾಗಿ ಗುದ್ದಿದನು. ಸರಿಯಾಗಿ ಬುದ್ಧಿಗಲಿಸದಿದ್ದರೆ, ಆತನು ಮತ್ತೆ ನನ್ನನ್ನು ಹಿಂಸಿಸುವನೆಂದು ತಿಳಿದು ಆತನಿಗೆ ನಾನೂ ಒಂದು ಪೆಟ್ಟನ್ನು ಕೊಟ್ಟೆನು. ಆಗ ಗ್ರಾಮರಕ್ಷಾಧಿಕಾರಿಯೊಬ್ಬನು ಬಂದು ನನ್ನನ್ನು ದೂರವಾಗಿ ಕಳುಹಿಸಿದನು. ನಾನು ಆತನ ಅಪ್ಪಣೆಗನುಸಾರವಾಗಿ ಕೊಂಚದೂರ ಹೋಗುವುದರೊಳಗಾಗಿ, ಹುಡುಗರ ಅದೊಂದು ದೊಡ್ಡ ಗುಂಪೇ ನನ್ನ ಬೆನ್ನಟ್ಟಿ ಬಂದು ನನಗೆ ಸಲ್ಲದ ಕಿರುಕುಳವನ್ನುಂಟುಮಾಡ ತೊಡಗಿತು. ನಾನು ಆತ್ಮಸಂರಕ್ಷಣೆಗಾಗಿ ಆ ಗುಂಪಿನೊಡನೆ ಹೋರಾಡ ಬೇಕಾಯಿತು. ಅಷ್ಟು ಹೊತ್ತಿಗೆ ಸರಿಯಾಗಿ ಈತನು ನನಗೆ ಒತ್ತಾಸೆಯಾಗಿ ಬಂದು ಸೇರಿದನು. ಈ ಅಧಿಕಾರಿಗಳೂ ಅಲ್ಲಿಗೆ ಬಂದು ನಮ್ಮನ್ನು ಅಪರಾಧಿಗಳೆಂದು ತಮ್ಮ ಠಾಣ್ಯದಲ್ಲಿ ರಾತ್ರಿಯೆಲ್ಲಾ ನಿರ್ಬಂಧಿಸಿದ್ದರು.

ನ್ಯಾಯಾಧಿಪತಿಯು ಈ ಸುದ್ದಿಯನ್ನು ಕೇಳಿ, ಹುಡುಗರು ಹೇಳಿದುದು ನಿಜವೆಂದು ನಂಬಿಕೊಂಡು ಹುಡುಗರನ್ನು ಕುರಿತು— "ಮಕ್ಕಳಿರಾ ! ಮುಂದಕ್ಕೆ ಇಂತಹ ತೊಂದರೆಗೆ ಸಿಕ್ಕಿಕೊಳ್ಳಬೇಡಿರಿ, ಈಗ ನಿಮ್ಮನ್ನು ಬಿಡುಗಡೆ ಮಾಡಿರುವೆನು. ನೀವು ಹೊಸಬರಾದುದರಿಂದ ಇಂತಹ ಪಟ್ಟಣಗಳಲ್ಲಿ ಎಚ್ಚರಿಕೆಯಿಂದ ಇರಬೇಕು," ಎಂದು ಬೋಧಿಸಿ ಕಳುಹಿಸಿ ಬಿಟ್ಟನು.

ರಂಗರಾಜ ಶರತ್ಕುಮಾರರಿಬ್ಬರೂ 'ಬದುಕಿದೆಯಾ ಬಡಜೀವವೇ' ಎಂದುಕೊಂಡು ಹೊರಟರು. ಹೋಗುವುದೆಲ್ಲಿಗೆ ? ಬಟ್ಟೆಯಿಲ್ಲ, ಬರೆಯಿಲ್ಲ, ಮನೆಯಿಲ್ಲ, ಮಟವಿಲ್ಲ; ತಿಂಡಿಯಿಲ್ಲ, ತೀರ್ಥವಿಲ್ಲ, ನೀನೇ ಎಂಬುವರು ಮೊದಲೇ ಇಲ್ಲ. ಆದರೂ ಇವರಿಬ್ಬರೂ ದೇಹ ಮಾತ್ರ ಸಹಾಯರಾಗಿ ಅದೃಷ್ಟದ ವಿಷಮ ಪರೀಕ್ಷೆಗೆ ಸಿದ್ಧರಾದರು.

ಶರತ್ಕುಮಾರನು ರಂಗರಾಜನನ್ನು ಕುರಿತು—ಮಿತ್ರನೇ ! ನಿನ್ನ ಕೈಯಲ್ಲಿ ಕಾಸು ಕವಡೆಗಳೇನಾದರೂ ಉಂಟೋ ? ಎಂದು ಪ್ರಶ್ನೆಮಾಡಿದನು.

ರಂಗ—ವಿಷ ತೆಗೆದುಕೊಳ್ಳುವುದಕ್ಕೂ ಒಂದು ಕಾಸಿಲ್ಲ.

ಶರತ್—ನನ್ನಲ್ಲಿಯೂ ಒಂದು ಕಾಸಿಲ್ಲ. ನಾವಿಬ್ಬರೂ ಸರಿಯಾಗಿಯೇ ಇರುವೆವು. ಈ ದಾರಿದ್ರ್ಯವನ್ನೇ ಬಂಡವಾಳವಾಗಿಟ್ಟುಕೊಂಡು ಜೀವಿಕೆಯನ್ನು ಕಲ್ಪಿಸಿಕೊಳ್ಳುವ.

ರಂಗ—(ನಸುನಕ್ಕು) ಅಯ್ಯಾ ಮಿತ್ರನೇ ! ನಮ್ಮಲ್ಲಿ ಬಂಡವಾಳವಿಲ್ಲದೇ ಏನು ?

ಶರತ್—ಅದೆಂತಹ ಬಂಡವಾಳ, ರಂಗರಾಜ ?

ರಂಗ—ಆರೋಗ್ಯ, ಕಾಯಪುಷ್ಟಿ, ಬುದ್ಧಿಶಕ್ತಿ ; ಇವುಗಳು ಬಂಡವಾಳವಲ್ಲವೇ ?

ಶರತ್—ಮುಖ್ಯವಾಗಿ ಇವೇ ಮೊದಲನೆಯ ಬಂಡವಾಳ.

ರಂಗ—ಎಲ್ಲದರ ಮೇಲೂ ನಮಗೆ ಉತ್ಸಾಹವುಂಟು. ಇದರಿಂದಲೇ ನಮಗೆ ದೈವವು ಸಹಾಯವಾಗುವುದು. ನಾವು ಮಟ್ಟಿಗೆ ಎದೆಗೆಡಬಾರದು.

ಶರತ್—ನೀನು ಹೇಳುವುದು ಸರಿ.

ರಂಗ—ಈಗ ನಾವೇನು ಮಾಡಬೇಕು ?

ಶರತ್—ಕೆಲಸವನ್ನು ಹುಡುಕಿಕೊಂಡು ನೀನು ಒಂದು ಬೀದಿಗೆ ತೆರಳು, ನಾನು ಮತ್ತೊಂದು ಬೀದಿಗೆ ಹೋಗುವೆನು. ಕೆಲಸವು ಮುಗಿದ ಮೇಲೆ ನಾವಿಬ್ಬರೂ ಇದೇ ಸ್ಥಳದಲ್ಲಿಯೇ ಸೇರುವ.

ಮಿತ್ರರಿಬ್ಬರೂ ಕೆಲಸಕ್ಕಾಗಿ ಬೇರೆಬೇರೆಯಾದರು. ರಂಗರಾಜನು ತನಗಾಗಿ ನಿಯಮಿತವಾಗಿದ್ದ ಬೀದಿಗೆ ಹೋಗಿ ಕೆಲಸವೇನಾದರೂ ಸಿಕ್ಕುವುದೇ ಎಂದು ಹಿಂದು ಮುಂದು ನೋಡಲಾರಂಭಿಸಿದನು. ಆ ಸಮಯಕ್ಕೆ ಸರಿಯಾಗಿ ದೊಡ್ಡಮನುಷ್ಯನೊಬ್ಬನು ಅಧಿಕಾರಮಂದಿರದಿಂದ ಹೊರಗೆ ಬಂದು ರಂಗರಾಜನನ್ನು ಕೈ ಸೈಗೆಯಿಂದ ಕರೆದು—ಎಲಾ ! ಈ ಮೂಟೆಯನ್ನು ಹೊತ್ತುಕೊಂಡು ನನ್ನಹಿಂದೆ ಬಾ. ನಿನಗೇನಾದರೂ ಕೊಡುವೆನು, ಎಂದು ಹೇಳಿ ಆ ಮೂಟೆಯನ್ನು ರಂಗರಾಜನ ತಲೆಯ ಮೇಲೆ ಹೊರಿಸಿ ಮುಂದಕ್ಕೆ ತೆರಳಿದನು. ದೊಡ್ಡಮನುಷ್ಯನು ಪರಸ್ಥಳಕ್ಕೆ ಹೋಗಬೇಕಾಗಿದ್ದಕಾರಣ ರೈಲು ಎಲ್ಲಿ ತಪ್ಪಿಹೋಗುವುದೋ ಎಂಬ ಹೆದರಿಕೆಯಿಂದ ಬೇಗ ಬೇಗನೆ ಹೊರಟನು. ಆ ಮೂಟೆಯು ಯೋಗ್ಯತೆಗೆ ಮೀರಿದ ಭಾರವುಳ್ಳುದಾಗಿದ್ದುದರಿಂದ, ರಂಗರಾಜನು ಅತಿ ಪ್ರಯಾಸಪಟ್ಟು ಆತನ ಹಿಂದೆಯೇ ಓಡಿದನು. ದೊಡ್ಡಮನುಷ್ಯನು ತನ್ನ ಮೂಟೆಯನ್ನು ರೈಲಿನಲ್ಲಿ ಹಾಕಿ ತಾನು ರೈಲು ಹತ್ತಿದ ಕೂಡಲೆ ಬಂಡಿಯು ಮುಂದಕ್ಕೆ ಹೊರಟುಹೋಯಿತು. ರಂಗರಾಜನಿಗೆ ಕೂಲಿ ಕೊಡತಕ್ಕ ದಣಿಯು ಹಿಂದಿರುಗಿ ನೋಡದೆ ಹೊರಟು ಹೋದನು. ಈ ಸಮಯದಲ್ಲಿ ರಂಗರಾಜನ ಮನದಲ್ಲಿ ಉಂಟಾದ ಭಾವವನ್ನು ವಾಚಕರೇ ಊಹಿಸಿಕೊಳ್ಳಲಿ. ಶ್ರಮಪಟ್ಟರೂ ಪ್ರಯೋಜನವಾಗಲಿಲ್ಲವೆಂದು ಅತಿಯಾಗಿ ಕತಿಗೊಂಡು, ರಂಗರಾಜನು ತನ್ನ ದುರ್ದೈವ

ವನ್ನು ಪರಿಪರಿಯಾಗಿ ನಿಂದಿಸಿಕೊಳ್ಳುತ್ತಾ ಹೊಗೆಬಂಡಿಯ ನಿಲ್ದಾಣದಿಂದ ಹಿಂದಿರುಗಿ ಬರುತ್ತಿದ್ದನು. ಆಗ ಗುಮಾಸ್ತನೊಬ್ಬನು ಬಂದು "ಯಜಮಾನರು ಹೊರಟುಹೋದರೇ ?" ಎಂದು ರಂಗರಾಜನನ್ನು ಕೇಳಿದನು. ಅದಕ್ಕೆ ರಂಗರಾಜನು—ಅಯ್ಯಾ ! ಆ ದೊಡ್ಡ ಮನುಷ್ಯರು ನನಗೆ ಕೂಲಿ ಕೊಡದೆ ಹೊರಟುಹೋದರು, ಎಂದು ನುಡಿಯಲಾಗಿ, ಆ ಗುಮಾಸ್ತನು—ಅಯ್ಯಾ ! ಆ ಕೂಲಿಯನ್ನು ನಿನಗೆ ಕೊಡುವುದಕ್ಕಾಗಿಯೇ ನಾನು ಬಂದುದು, ಎಂದು ಹೇಳಿ ರಂಗರಾಜನ ಕೈಯ್ಯಲ್ಲಿ ಒಂದು ರೂಪಾಯಿಯನ್ನಿಟ್ಟನು. ರಂಗರಾಜನು ಪರಮಾನಂದಭರಿತನಾಗಿ ಆ ಗುಮಾಸ್ತನಿಗೆ ವಂದನೆಗಳನ್ನರ್ಪಿಸಿ ಹೊರಟುಹೋದನು.

ರಂಗರಾಜನು ದಾರಿಯುದ್ದಕ್ಕೂ ಚಿಂತಿಸಿದುದೇನೆಂದರೆ:—ನನ್ನ ಮೊದಲನೆಯ ದಿನದ ಉದ್ಯೋಗವು ಒಳ್ಳೆಯ ಪ್ರತಿಫಲವನ್ನೇ ಕೊಟ್ಟಿತು. ಕಷ್ಟಪಟ್ಟು ಕೆಲಸಮಾಡತಕ್ಕವನಿಗೆ ದೈವದ ಸಾಹಾಯ್ಯವು ಇಲ್ಲವೆಂದರೇನು ? ಇದಕ್ಕೆ ನಾನೇ ಉದಾಹರಣೆಯಲ್ಲವೇ ? ಭಗವಂತನು ನಮ್ಮಗಳ ಯೋಗಕ್ಷೇಮವನ್ನು ವಹಿಸಿರುವಲ್ಲಿ, ನಾವೇಕೆ ಸಂಕಟಪಡಬೇಕು ? ನಾನು ಹೊಟ್ಟೆಯ ತುಂಬಾ ಊಟಮಾಡಿ ಎಷ್ಟೋ ದಿನಗಳಾದುವು. ನನ್ನಂತೆಯೇ ನನ್ನ ಮಿತ್ರನೂ ಹಸಿದಿರುವನು. ಈಗ ನಾನು ಆತನನ್ನು ಕಂಡು ನಾವಿಬ್ಬರೂ ಸೇರಿಕೊಂಡು ಭೋಜನಶಾಲೆಗೆ ಹೋಗಿ ಊಟಮಾಡಬೇಕು. ಊಟವಿಲ್ಲದಿದ್ದರೆ ಕೆಲಸಮಾಡುವುದಕ್ಕಾಗಲಾರದು. ಅಯ್ಯೋ ಪಾಪ ! ನನ್ನ ಮಿತ್ರನಿಗೆ ಸರಿಯಾದ ಕೆಲಸ ಸಿಕ್ಕಿ ಕೈಗೆ ಕಾಸು ಬಂದಿರುವುದೋ ಇಲ್ಲವೋ ! ಬಲ್ಲವರಾರು ? ಈಗ ನಾವಿಬ್ಬರೂ ಏಕೀಭವಿಸಿರುವುದರಿಂದ, ಆರೊಬ್ಬನಿಗೆ ಸಂಪಾದನೆಯಾದರೂ ಅದು ಇಬ್ಬರಿಗೂ ಸೇರಿದುದು. ಈಗಾಗಲೇ ಭೋಜನದ ಸಮಯವು ಸಮೀಪಿಸಿಕೊಂಡು ಬರುತ್ತಿರುವುದು."

ರಂಗರಾಜನು ಈ ಬಗೆಯಾಗಿ ಚಿಂತಿಸುತ್ತಾ ತಮ್ಮ ಸಂಕೇತದ ಸ್ಥಳಕ್ಕೆ ಬಂದು ನೋಡಲಾಗಿ, ಅಲ್ಲಿ ಶರತ್ಕುಮಾರನು ದುಃಖದಿಂದ ತಲೆವಾಗಿ ನಿಂತಿದ್ದನು. ರಂಗರಾಜನು ಆತನನ್ನು ಕಂಡಕೂಡಲೆ, ಶರತ್ಕುಮಾರನು ಸಂತೋಷದಿಂದ—ರಂಗರಾಜ ! ಕೆಲಸವೇನಾದರೂ ದೊರೆಯಿತೇ ? ಎಂದು ಕೇಳಿದನು.

ರಂಗ—ದೊರೆಯಿತು.

ಶರತ್—ಸಂಪಾದನೆಯೆಷ್ಟು ?

ರಂಗ—ಒಂದು ರೂಪಾಯಿ.

ಶರತ್—(ಆಶ್ಚರ್ಯದಿಂದ) ಒಂದು ರೂಪಾಯಿ !

ರಂಗ—ಅಹುದು, ಒಂದು ರೂಪಾಯಿ.

ಶರತ್—ಹಾಗಾದರೆ ಇಬ್ಬರಿಗೂ ಕೊಬ್ಬಿದ ಊಟ ದೊರೆತಂತಾಯಿತು. ಈಗ ನಾವೇ ಲಕ್ಷಾಧಿಪತಿಗಳು.

ರಂಗ—ಲಕ್ಷಾಧಿಪತಿಗಳೋ ಭಿಕ್ಷಾಧಿಪತಿಗಳೋ ಬಲ್ಲವರೇ ಬಲ್ಲರು. ನಡೆ, ಭೋಜನಕ್ಕೆ ತೆರಳುವ.

ಇಬ್ಬರೂ ಭೋಜನಶಾಲೆಗೆ ಹೋಗಿ ಊಟಕ್ಕೆ ಕುಳಿತುಕೊಂಡು ಮಾತನಾಡಿಕೊಂಡರು.

ರಂಗ—ಮಿತ್ರನೇ ! ನಿನ್ನ ಪ್ರಯತ್ನವೇನಾಯಿತು ?

ಶರತ್—ಫಲಿಸಲಿಲ್ಲ.

ರಂಗ—ನನಗೆ ಹಣ ದೊರೆಯದಿದ್ದರೆ, ನಮ್ಮಗಳ ಗತಿಯೇನಾಗಬೇಕಾಗಿದ್ದಿತು.

ಶರತ್—ಕಂಡೇ ಇದೆ ಬೀದಿಯ ಹೆಣವೆಂಬುದು.

ರಂಗ—ದೇವರು ದೊಡ್ಡವನು.

ಶರತ್—ನಮ್ಮಿಬ್ಬರಲ್ಲಿ ಆರಿಗೆ ಸಂಪಾದನೆಯಾದರೂ ಒಂದೆ. ಇದಕ್ಕಾಗಿ ಚಿಂತೆಯೇಕೆ ? ಕೆಲಸ ಮಾಡಿದರೆ ಫಲವುಂಟೆಂದು ಬಲ್ಲವರು ನುಡಿವರು. ನಾವು ಕೆಲಸ ಮಾಡಲು ಸಿದ್ಧರಾಗಿರುವಾಗ, ಎಂದಾದರೊಂದು ದಿನ ಫಲವಾಗಲೇ ಬೇಕು. ಭೋಜನವಾದ ಮೇಲೆ ಮತ್ತೆ ಕೆಲಸಕ್ಕೆ ಹೋಗಿ ನೋಡುವ.

ರಂಗ—ಆಗಬಹುದು.

ಭೋಜನವಾಯಿತು. ಇಬ್ಬರೂ ಭೋಜನಕ್ಕಾಗಿ ಎಂಟಾಣೆಗಳನ್ನು ಸಲ್ಲಿಸಿ ಮತ್ತೆ ಕೆಲಸಕ್ಕೆ ತೆರಳಿದರು. ಸಾಯಂಕಾಲದ ವರೆಗೂ ಅಲೆದಾಡಿ ನೋಡಿದರು. ಒಂದು ಕಾಸೂ ಪ್ರಯೋಜನವಾಗಲಿಲ್ಲ. ಆಗ ಶರತ್ಕುಮಾರನು ರಂಗರಾಜನನ್ನು ಕುರಿತು—ರಂಗರಾಜ ! ಕೈಯಲ್ಲಿ ಎಂಟು ಆಣೆಗಳೇ ಉಳಿದಿರುವುವು. ಈಗ ನಾವು ಅದನ್ನೂ ವೆಚ್ಚಮಾಡಿಬಿಟ್ಟರೆ ನಾಳೆಯ ಬೆಳಗಿನ ಆಹಾರಕ್ಕೆ ಏನೂ ಇಲ್ಲದಂತಾಗಿ ಮತ್ತೆ ಸಂಕಟಪಡಬೇಕಾಗುವುದು.

ಆದುದರಿಂದ ಈಗ ನೀರನ್ನು ಕುಡಿದು ರಾತ್ರಿಯನ್ನು ಕಳೆಯೋಣ, ಎಂದು ನುಡಿದನು.

ರಂಗ—ನಾವು ಈ ಚಳಿಯಲ್ಲಿ ರಾತ್ರಿಯನ್ನು ಹೇಗೆ ಕಳೆಯಬೇಕು ?

ಶರತ್—ಹೇಗೆ ಕಳೆಯಬೇಕೋ ನನಗೊಂದೂ ತೋರದು.

ಪ್ರಿಯಪಾಠಕ ಮಹಾಶಯ ! ಉತ್ತರ ಕ್ಷಣದಲ್ಲಿ ಏನಾಗುವುದೆಂಬು ದನ್ನು ಆರುತಾನೇ ಬಲ್ಲರು ? ಊಹಾಪೋಹಜ್ಞಾನವಿಲ್ಲದ ನಾವು ಆಲೋಚಿಸುವುದೇ ಒಂದು, ನಮ್ಮ ಪ್ರಾಚೀನ ಕರ್ಮವು ಫಲಿಸುವುದೇ ಒಂದು. ಇದನ್ನರಿಯದೆಯೇ ಮಾನವನು ತನ್ನ ಸಮಾನರಿಲ್ಲವೆಂದು ಹೆಮ್ಮೆ ಪಡುವನು. ಈ ಹೆಮ್ಮೆಗೆ ಅರ್ಥವಾದರೂ ಏನು ?

ಗೆಳೆಯರಿಬ್ಬರೂ ರಾತ್ರಿಯನ್ನು ಹೇಗೆ ಕಳೆಯಬೇಕೆಂದು ಆಲೋಚಿಸುತ್ತಾ ದಾರಿ ಹಿಡಿದು ತೆರಳಿದರು. ಆಗ ಅವನೋ ಒಬ್ಬನು ಮುಂದೆ ಬಂದು-- ಮಕ್ಕಳಿರಾ ! ಕೆಲಸ ಮಾಡಲು ಇಷ್ಟ ಪಡುವಿರಾ ? ಎಂದು ಕೇಳಿದನು.

ಶರತ್—ಕೆಲಸವೇ ?

ಆಗಂತುಕ—ಅಹುದು.

ಶರತ್—ಅದೆಂತಹ ಕೆಲಸ ?

ಆಗಂತುಕ—ಸೈನ್ಯದ ಕೆಲಸ.

ಶರತ್—ಈಗ ಯುದ್ಧದ ಸುದ್ದಿಯೇನಾದರೂ ಉಂಟೋ ?

ಆಗಂತುಕ—ಇಲ್ಲದೇ ಏನು ?

ಶರತ್—ಆರೊಡನೆ ಯುದ್ಧವು ?

ಆಗಂತುಕ—ಶತ್ರುಗಳೊಡನೆ.

ಶರತ್—ಶತ್ರುಗಳು ಆದಾರು ?

ರಂಗ—ಶತ್ರುಗಳು ಆರಾದರೇನು ? ನನಗಂತೂ ಯುದ್ಧ ವೆಂದರೆ ಮೈ ಉರಿಯುವುದು, ನಾನು ಸೈನ್ಯಕ್ಕೆ ಎಂದಿಗೂ ಸೇರೆನು.

ಶರತ್—(ಆಗಂತುಕನನ್ನು ಕುರಿತು) ಸೈನ್ಯಕ್ಕೆ ಸೇರುವುದರಿಂದ ನಮಗೆ ಪ್ರತಿಫಲವಾದರೂ ಏನು ?

ಆಗಂತುಕ—ಎಂಟಾಣೆಗಳು.

ಶರತ್—ಮುಂಗಡವಾಗಿ ಕೊಡುವುದಾದರೆ ನಾವು ಬರುವೆವು.

ರಂಗ—ನನಗಿಷ್ಟವಿಲ್ಲ.

ಶರತ್—ಎಂಟಾಣೆಯೆಂದರೆ ಅರ್ಥವಾಗಲಿಲ್ಲವೇ, ರಂಗರಾಜ! ನಾಟಕದಲ್ಲಿ ಕೊಂಚ ಹೊತ್ತು ಸೈನಿಕರ ವೇಷವನ್ನು ತಾಳಿ ಅಭಿನಯಿಸಬೇಕಂತೆ. ಇದಕ್ಕಾಗಿ ಒಬ್ಬೊಬ್ಬರಿಗೆ ಎಂಟಾಣೆ ಬಂದರೆ ನಮಗೆ ನಷ್ಟವಾದುದೇನು? ನಾವು ಹೇಗಾದರೂ ರಾತ್ರಿಯನ್ನು ಕಳೆಯಬೇಕು.

ರಂಗ—ಹಾಗಾದರೆ ನಿನ್ನ ಇಷ್ಟದಂತಾಗಲಿ.

ಶರತ್—ಆಗಂತುಕ ಮಹಾಶಯ! ನಮ್ಮ ಹಣವನ್ನು ಮುಂಡಗೆವಾಗಿ ಕೊಡೋಣವಾಗಲಿ.

ಆಗಂತುಕ—ನಾಟಕವಾದ ಕೂಡಲೆ ಕೊಡುವೆವು.

ಶರತ್—ಈಗಲೇ ಕೊಡಬೇಕು.

ಆಗಂತುಕ—ಈಗಲೇ ಕೊಡಬೇಕೆ?

ಶರತ್—ಈಗಲೇ ಕೊಡಬೇಕು; ಇಲ್ಲವಾದರೆ ನಾವು ಬರಲಿಕ್ಕಿಲ್ಲ.

ಆಗಂತುಕನು ಈ ಮಾತನ್ನು ಕೇಳಿದ ಕೂಡಲೇ ಶರತ್ಕುಮಾರನ ಬೆನ್ನ ಮೇಲೆ ಬಲವಾದ ಒದೆಯನ್ನು ಕೊಟ್ಟನು. ಶರತ್ಕುಮಾರನು ಈ ಅತ್ಯಾಚಾರವನ್ನು ತಡೆಯಲಾರದೆ ಆಗಂತುಕನ ಎದೆಯ ಮೇಲೆ ಬಲವಾಗಿ ಒದೆದನು. ಆಗಂತುಕನು ದಾಯತಪ್ಪಿ ನೆಲದ ಮೇಲೆ ಬಿದ್ದು—ಎಲಾ! ನನ್ನನ್ನು ಒಡೆಯುವೆಯಾ? ಎಂದು ಗದ್ದರಿಸಿದನು.

ಶರತ್—ನಾವು ಸೈನಿಕರು. ನಮ್ಮನ್ನು ಕೆಣಕಿದವರಿಗೆ ಆಗುವ ಗತಿಯೇ ಹೀಗೆ.

ಆಗಂತುಕ—ಅಯ್ಯಾ! ಕೋಪ ಮಾಡಬೇಡ. ನಿಮ್ಮನ್ನು ಪರೀಕ್ಷಿಸುವುದಕ್ಕಾಗಿ ನಾನು ಹೀಗೆ ಮಾಡಿದೆನು.

ಶರತ್—ಪರೀಕ್ಷಿಸಿದುದಾಯಿತಷ್ಟೇ? ಈಗಲಾದರೂ ಹಣವನ್ನು ಸಲ್ಲಿಸುವುದಕ್ಕೆ ಅಡ್ಡಿ ಯೇನಿರುವುದು?

ಆಗಂತಕನು ಹೇಳಿದಷ್ಟು ಹಣವನ್ನು ಮುಂಗಡವಾಗಿ ಸಲ್ಲಿಸಿ ಇವರಿಬ್ಬರನ್ನೂ ಕರೆದು ಕೊಂಡು ಹೋಗಿ ನಾಟಕದ ಕಾರ್ಯದರ್ಶಿಯ ಬಳಿಯಲ್ಲಿ ನಿಲ್ಲಿಸಿದನು. ಕಾರ್ಯದರ್ಶಿಯು ಯಥಾರೀತಿಯಾಗಿ ಇವರಿಬ್ಬರಿಗೂ ಪೂರ್ವಾಭ್ಯಾಸವನ್ನು ಮಾಡಿಸಿ ರಂಗಭೂಮಿಗೆ ಕರೆತಂದನು. ಇವರಿಬ್ಬರೂ ತಮ್ಮ ತಮ್ಮ ಕೆಲಸವನ್ನು ಜನರ ಮೆಚ್ಚುಗೆಗೆ ತಕ್ಕಂತೆ ನೆರವೇರಿಸಿ ನಾಟಕಾನಂತರದಲ್ಲಿ ಹೊರ ಹೊರಟರು.

ಶರತ್—ಮಿತ್ರನೇ! ನಾವು ಈ ರಾತ್ರಿಯಲ್ಲಿಯೂ ಕೊಂಚ ಫಲಾಹಾರವನ್ನು ಮಾಡಿ ಭೋಜನಶಾಲಾಧಿಕಾರಿಗೆ ಬಾಡಿಗೆಯ ಹಣವನ್ನಾದರೂ ಕೊಟ್ಟು ಈ ರಾತ್ರಿಯನ್ನು ಸುಖವಾಗಿ ಕಳೆಯಬಹುದಲ್ಲವೇ?

ರಂಗ—ಅಯ್ಯಾ! ಈಗ ರಾತ್ರಿಯಲ್ಲಿ ಬಲು ಹೊತ್ತಾಗಿ ಹೋಗಿರುವುದು. ಅವೇಳೆಯಲ್ಲಿ ಭೋಜನ ಮಾಡುವುದು ಅಪಾಯಕರವು. ನಾವು ಅಲ್ಲಲ್ಲಿ ಸಂಚಾರಮಾಡಿಕೊಂಡಿರುವಷ್ಟರೊಳಗಾಗಿಯೇ ಬೆಳಗಾಗಿ ಹೋಗುವುದು. ಇದಕ್ಕಾಗಿ ನಾವು ಹಣವನ್ನೇಕೆ ವೆಚ್ಚಮಾಡಬೇಕು? ಹಣವಿದ್ದರೆ ನಾಳೆಗೆ ಬೇಡವೇ?

ಶರತ್—ನೀನು ಹೇಳುವುದೂ ಸರಿ. ಎಲ್ಲಿಗಾದರೂ ಹೋಗಿ ರಾತ್ರಿಯನ್ನು ಕಳೆಯುವುದಕ್ಕೆ ದಾರಿಮಾಡುವ. ಈಗ ಒಂದು ದಿವಸದ ಜೀವನವು ನಮ್ಮ ಕೈಯಲ್ಲಿರುವಾಗ, ನಮ್ಮನ್ನು ಮಾತನಾಡಿಸುವವರಾರು? ರಂಗರಾಜ, ನಾವು ಎಲ್ಲಿಗಾದರೂ ತೆರಳೋಣ, ನಡೆ.

---

# ಐದನೆಯ ಅಧ್ಯಾಯ.

**ಇಬ್ಬರು ಹುಡುಗರೂ ಅಧಿಕಾರಿಯೂ. ಪಲಾಯನ ಸೂಕ್ತ ಪಾರಾಯಣ. ರಾತ್ರಿಯ ಸಾಹಸಕಾರ್ಯ. ವಿಯೋಗಾಂತನಾಟಕ. ರಂಗರಾಜನ ಎಳಿಗೆ. ಕಾರ್ಯಕ್ರಮದ ಮಾರ್ಪಾಡು.**

ಇಬ್ಬರು ಹುಡುಗರ ಸಂತೋಷಕ್ಕೆ ಪಾರವೇ ಇರಲಿಲ್ಲ. ಇವರ ಸಂತೋಷವು ಕೋಟ್ಯಧಿಪತಿಯ ಸಂತೋಷವನ್ನೂ ಮೀರಿದ್ದಿತೆಂದು ಹೇಳಿದರೂ ಸಾಲದು. ರಾತ್ರಿಯಲ್ಲಿ ಬೆಚ್ಚಗೆ ಮಲಗುವುದಕ್ಕೆ ಒಂದು ಸ್ಥಲವು ದೊರೆಯದಿದ್ದರೂ ಇವರ ಸಂತೋಷವೇ ಸಂತೋಷ. ಸಂತೋಷಕ್ಕೆ ಮನಸ್ಸು ಕಾರಣವೇ ಹೊರತು ವಸ್ತುಗಳಲ್ಲ. ವಸ್ತುಗಳಲ್ಲಿಯೇ ಸಂತೋಷವೆಂಬುದು ಅಡಗಿದ್ದಿದ್ದರೆ, ಆರೂ ದುಃಖಪಡುವುದಕ್ಕೆ ಕಾರಣವೇ ಇರುತ್ತಿರಲಿಲ್ಲ.

ಇಬ್ಬರು ಬಾಲರೂ ಸಂತೋಷದಿಂದ ಮೈಯುಬ್ಬಿದವರಾಗಿ ದಾರಿಯಲ್ಲಿ ಹೋಗುತ್ತಿದ್ದರು. ಆಗ ಶರತ್ಕುಮಾರನು ರಂಗರಾಜನನ್ನು ಕುರಿತು—ಮಿತ್ರನೇ! ನಾವು ಈಗ ಎಚ್ಚರಿಕೆಯಿಂದಿರಬೇಕು; ಇಲ್ಲವಾದರೆ ರಾತ್ರಿಯ ಅಧಿಕಾರಿಗಳು ನಮ್ಮನ್ನು ಬೇಟೆಯಾಡಿ ಬಿಡುವರು. ಪಟ್ಟಣವಾಸವು ಸುಖ

ಕರವೆಂದು ತೋರಿಕೊಂಡರೂ ದುಃಖಮಯವಾಗಿರುವುದು. ನಾವು ಮತ್ತೊಂದು ರೆತೆವೆಂದರೆ ಮತ್ತೆ ಕಾರಾಗೃಹದಲ್ಲಿ ರಾತ್ರಿಯನ್ನು ಕಳೆಯಬೇಕಾಗುವುದು.

ರಂಗ—ಏನ ಹೇಳುವೆ ? ನಾವು ರಾತ್ರಿಯಲ್ಲಿ ಎಲ್ಲಿಯಾದರೂ ಮಲಗಿಕೊಳ್ಳುವುದು ಕೂಡ ಅಪರಾಧವೇನು ?

ಶರತ್—ಅಹುದು; ಮಹಾಪರಾಧ.

ರಂಗೆ—ಅದೆಂತಹ ಅಪರಾಧ ?

ಶರತ್—ಕಳ್ಳರೆಂದು ನಮ್ಮನ್ನು ನಿರ್ಬಂಧಿಸುವರು. ಅದುದರಿಂದ ನಾವು ನದಿಯ ಬಳಿಗೆ ಹೋಗಿ ಗಿಡುಗಳ ಮರೆಯಲ್ಲಿಯಾದರೂ ನಿದ್ರಿಸಿ ರಾತ್ರಿಯನ್ನು ಕಳೆಯುವುದು ಸೂಕ್ತವಾಗಿರುವುದು.

ರಂಗ—ಅಲ್ಲಿಯೂ ಅಧಿಕಾರಿಗಳ ಕಾಟ ತಪ್ಪುವ ಹಾಗಿಲ್ಲವೆಂದು ತೋರುವುದು.

ಶರತ್—ಅಹುದು, ಅಲ್ಲಿ ಅಧಿಕಾರಿಗಳ ಕಾಟವದಂತಿರಲಿ, ಅಲ್ಲಿ ಮಲಗುವುದರಿಂದ ರೋಗದ ಬಾಧೆಯೂ ಉಂಟು.

ಹುಡುಗರು ಈರೀತಿಯಾಗಿ, ಮಾತನಾಡಿಕೊಳ್ಳುತ್ತಾ ಹೋಗುತ್ತಿರುವಲ್ಲಿ, ರಾತ್ರಿಯ ಅಧಿಕಾರಿಯೊಬ್ಬನು ಬಂದು—ಮಕ್ಕಳಿರಾ! ರಾತ್ರಿಯ ಇಷ್ಟುಹೊತ್ತಿನಲ್ಲಿ ನೀವು ಸಂಚರಿಸುತ್ತಿರುವುದಕ್ಕೆ ಕಾರಣವೇನು ! ಎಂದು ಕೇಳಿದನು.

ಶರತ್—ರಾತ್ರಿಯ ಹೊತ್ತಿನಲ್ಲಿ ನಗರದ ಶಾಂತ ಸೌಂದರ್ಯವನ್ನು ನೋಡಬೇಕೆಂದು ಬಂದೆವು.

ಅಧಿಕಾರಿ—ಮತ್ತೆ ನಿಮ್ಮ ಚೆಲ್ಲಾಟವು ಬೇಕಿಲ್ಲ. ಸರಿಯಾಗಿ ಉತ್ತರ ಕೊಡು.

ಶರತ್—ಸರಿಯಾಗಿ ಉತ್ತರಬರಬೇಕಾದರೆ, ಉತ್ತರಕ್ಕೆ ತಿರುಗಿಕೊಂಡು ಹೋಗಬೇಕು.

ಅಧಿಕಾರಿ—ಎಲಾ, ದುರುಳ !

ಅಧಿಕಾರಿಯು ಹೀಗೆ ಹೇಳುತ್ತಾ ಶರತ್ಕುಮಾರನನ್ನು ಹಿಡಿಯುವುದಕ್ಕೆ ಮುಂದು ಸರಿದು ಬಂದನು. ಅಷ್ಟರಲ್ಲಿ ಇಬ್ಬರು ಹುಡುಗರೂ ಮಾತನಾಡಿಕೊಂಡು ಪಲಾಯನ ಸೂಕ್ತಪಾರಾಯಣ ಮಾಡಿಬಿಟ್ಟರು.

ಅಧಿಕಾರಿಯು ಕಾರಣಾಂತರದಿಂದ ಬೆನ್ನಟ್ಟಿ ಬರಲಿಲ್ಲ. ಹುಡುಗರು ಬಲು ದೂರ ಓಡಿ ಹೋದ ಬಳಿಕ ರಂಗರಾಜನು ಶರತ್ಕುಮಾರನನ್ನು ಕುರಿತು—

ಅಯ್ಯೋ! ಬಡವರಾಗಿರಬಾರದು. ಬಡತನವೆಂಬುದು ಮಹಾಪಾತಕಗಳಲ್ಲಿ ಮೊದಲನೆಯದಾಗಿರುವುದು, ಎಂದು ದುಃಖದ ಮಾತನಾಡಿದನು.

ಶರತ್—ಏನ ಮಾಡಲಾದೀತು? ಪ್ರಾಚೀನ ಕರ್ಮವನ್ನು ಅನುಭವಿಸಿಯೇ ತೀರಬೇಕು. ಹಿಂದುಮುಂದಣ ಆಲೋಚನೆಯಿಲ್ಲದೆ ಹಿಗ್ಗುತ್ತಾ ಕರ್ಮವನ್ನು ಮಾಡಿ ಈಗ ಅದರ ಫಲವು ನಮಗೆ ಬೇಡವೆಂದರೆ ಕೇಳುವವರಾರು? ಮಾಡಿದುದನ್ನು ಉಣ್ಣೋ ಮಹರಾಯ!

ರಂಗ—ನಾವು ಬೀದಿಯಲ್ಲಿ ನಿಂತು ಮಾತನಾಡಿದರೂ ಅಪರಾಧವಾದೀತು. ನಡೆ, ಮತ್ತೆಲ್ಲಿಗಾದರೂ ಹೋಗಿ ತಲೆಯನ್ನು ಮರೆಮಾಡಿಕೊಳ್ಳುವ

ಶರತ್—ಈಗ ಹಾಗೆ ಮಾಡದಿದ್ದರೆ ನಮಗೆ ಬೇರೆಯ ಗತಿಯೇ ಇರುವುದಿಲ್ಲ. ನಡೆ, ಹೋಗುವ.

ಇಬ್ಬರೂ ಹೀಗೆಂದು ಮಾತನಾಡಿಕೊಂಡು ನದಿಯ ತೀರದಲ್ಲಿದ್ದ ನಾವೆಯ ನಿಲ್ದಾಣದ ಕಡೆಗೆ ಬಂದರು. ಅಷ್ಟು ಹೊತ್ತಿಗೆ ಸರಿಯಾಗಿ ದುಪ್ಪೆಂದು ನೀರಿನಿಂದ ಅದೊಂದು ಶಬ್ದವೆದ್ದಿತು. ಆರೋ ನೀರಿನಲ್ಲಿ ಬಿದ್ದರೆಂದು ತಿಳಿದು ಶರತ್ಕುಮಾರನು ನೀರಿನಲ್ಲಿ ದುಮ್ಮಿಕ್ಕಿದನು. ಅವನ ಹಿಂದೆಯೇ ರಂಗರಾಜನೂ ನುಗ್ಗಿದನು. ಇವರಿಬ್ಬರೂ ಈಜುವುದರಲ್ಲಿ ಅದ್ವಿತೀಯರಾಗಿದ್ದುದರಿಂದ, ನೀರಿನಲ್ಲಿ ಬಿದ್ದ ವ್ಯಕ್ತಿಯನ್ನು ಉಪಾಯದಿಂದ ಹಿಡಿದೆತ್ತಿ ದಡವನ್ನು ಸೇರಿಸಿದರು. ಆಗ ಮತ್ತೆ ಕೆಲವರು ಕೈಗಳಲ್ಲಿ ದೀಪಗಳನ್ನು ಹಿಡಿದುಕೊಂಡು ದಡಬಡನೆ ಓಡಿ ಬಂದರು. ಓಡಿಬಂದವರು ಹುಡುಗರನ್ನು ಕಂಡು—ಏನಾಯಿತು, ಏನಾಯಿತು? ನೀರಿನಲ್ಲಿ ಬಿದ್ದವರಾರು? ಎಂದು ಸಂಭ್ರಮದಿಂದ ಕೇಳಿದರು.

ಹುಡುಗರು ಈ ಪ್ರಶ್ನೆಗೆ ಉತ್ತರಕೊಡದೆ ತಮ್ಮ ಕೆಲಸವನ್ನು ನೆರವೇರಿಸಿ ನೀರಿನಲ್ಲಿ ಬಿದ್ದ ವ್ಯಕ್ತಿಯನ್ನು ಅಪಾಯವಿಲ್ಲದ ಹಾಗೆ ಬದುಕಿಸಿದರು.

ಎಲ್ಲರೂ ಹತ್ತಿರಕ್ಕೆ ಬಂದು ನೋಡಲಾಗಿ, ನೀರಿನಲ್ಲಿ ಬಿದ್ದ ವ್ಯಕ್ತಿಯು ನೌಕಾಧಿಪತಿಯೇ ಆಗಿದ್ದನು. ಎಲ್ಲರೂ ಬೆರಗಾಗಿ ನಿಂತುಬಿಟ್ಟರು. ಆಗ ನೌಕಾಧಿಪತಿಯು ಇಬ್ಬರು ಹುಡುಗರನ್ನು ನೋಡಿ—ಮಕ್ಕಳಿರಾ! ನೀವು ನನಗೆ ಪ್ರಾಣದಾನ ಮಾಡಿದ ಉಪಕಾರಕ್ಕೆ ನಾನು ನಿಮಗೆ ಚಿರಕಾಲದ ಋಣಿಯಾಗಿರುವೆನು. ನೀವಿಬ್ಬರೂ ಈ ರಾತ್ರಿಯಲ್ಲಿ ನನ್ನೊಡನೆಯೇ ಇರಬೇಕು, ಎಂದು ಹೇಳಿ ಅವರನ್ನು ತನ್ನ ಕಕ್ಷ್ಯಕ್ಕೆ ಕರೆದುಕೊಂಡು ಹೋಗಿ

ಒದ್ದೆಯ ಬಟ್ಟೆಗಳನ್ನು ತೆಗೆದು ಹಾಕುವಂತೆ ಹೇಳಿ ಒಳ್ಳೆಯ ಬಟ್ಟೆಬರೆಗಳನ್ನು ಉಡುವುದಕ್ಕೆ ಕೊಟ್ಟನು. ಬಳಿಕ ಹುಡುಗರ ವೃತ್ತಾಂತವನ್ನು ಕೇಳಿ ವ್ಯಸನಪಟ್ಟವನಾಗಿ, ತನ್ನೊಡನೆ ಬರುವುದಾದರೆ ಗೌರವಾರ್ಹವಾದ ಜೀವಿಕೆಯನ್ನು ಇಬ್ಬರಿಗೂ ಕಲ್ಪಿಸಿಕೊಡುವುದಾಗಿ ತಿಳಿಸಿದನು.

ಶರತ್ಕುಮಾರನು ಈ ಮಾತನ್ನು ಕೇಳಿ ಕೆಲಸವು ಸಿಕ್ಕುವುದೆಂಬ ಸಂತೋಷದಿಂದ ಹಿಗ್ಗಿದವನಾಗಿ ರಂಗರಾಜನನ್ನು ಕುರಿತು—ಮಿತ್ರನೇ! ನಿನ್ನ ಅಭಿಪ್ರಾಯವೇನು? ಎಂದನು.

ರಂಗರಾಜ—ನನಗೆ ಇಷ್ಟವಿಲ್ಲ.

ಶರತ್—ನಿನ್ನನ್ನು ಅಗಲುವುದೆಂಬುದೊಂದಿಲ್ಲದಿದ್ದರೆ, ನಾನು ಕೆಲಸಕ್ಕೆ ಒಪ್ಪಿಕೊಳ್ಳುತಿದ್ದೆನು.

ರಂಗ—ನಿನಗೆ ಇಷ್ಟವಿರುವುದಾದರೆ, ನೀನು ಹೋಗುವುದಕ್ಕೆ ನನ್ನ ಅಡ್ಡಿಯೇನೂ ಇರುವುದಿಲ್ಲ.

ಶರತ್—ಮಿತ್ರನೇ! ನಿನ್ನ ಅಡ್ಡಿಯೇನೂ ಇಲ್ಲದಿರುವುದಾದರೆ, ನಾನು ಹೋಗಿಬರುವೆನು.

ರಂಗ—ನಮ್ಮಿಬ್ಬರಲ್ಲಿ ನೀನಾದರೂ ಸುಖದಿಂದಿರು.

ಶರತ್ಕುಮಾರನು ನೌಕಾಧಿಪತಿಯ ಮಾತಿಗೆ ಒಪ್ಪಿಕೊಂಡು, ಹೊರಡುವುದಕ್ಕೆ ಸಿದ್ಧನಾದನು. ನೌಕಾಧಿಪತಿಯು ಶರತ್ಕುಮಾರನನ್ನು ನೌಕೆಯೊಳಗಿನ ಒಂದು ಕೆಲಸಕ್ಕೆ ನಿಯಮಿಸಿಕೊಂಡು, ರಂಗರಾಜನಿಗೆ ಒಳ್ಳೆಯ ಉಡುಗೆ ತೊಡುಗೆಗಳನ್ನು ಕೊಳ್ಳುವುದಕ್ಕೆಂದು ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟನು.

ನೌಕಾಧಿಪತಿಯು ರಂಗರಾಜನನ್ನು ಸತ್ಕರಿಸಿ ತನ್ನ ಕೆಲಸದ ಮೇಲೆ ತೆರಳಿದನು. ರಂಗರಾಜ ಶರತ್ಕುಮಾರರು ಬೆಳಗಾಗುವ ವರೆಗೂ ಮನಬಂದಂತೆ ಮಾತನಾಡಿದರು. ಆಗಿಂದಾಗ ಪತ್ರವ್ಯವಹಾರವು ನಡೆಯುತ್ತಿರಬೇಕೆಂದು ಒಬ್ಬರಿಗೊಬ್ಬರು ಕಟ್ಟುಮಾಡಿಕೊಂಡರು. ಇಷ್ಟಾಗುವುದರೊಳಗಾಗಿ ಹಡಗು ಹೊರಡುವುದಕ್ಕೆ ಸಿದ್ಧವಾಯಿತು. ಆಗ ಶರತ್ಕುಮಾರನು ತನ್ನಲ್ಲಿದ್ದ ಎಂಟಾಣೆಯನ್ನು ತೆಗೆದು ರಂಗರಾಜನ ಕೈಗೆ ಕೊಟ್ಟು—ಮಿತ್ರಮಹಾಶಯ! ನನ್ನ ಪ್ರೀತಿಗಾಗಿ ಈ ಅಲ್ಪ ದ್ರವ್ಯವನ್ನು ನೀನು ವೆಚ್ಚಮಾಡಿ ಮಿಠಾಯಿಯನ್ನು ತಿನ್ನು, ಎಂದು ನುಡಿದನು. ಈ ಮಾತು ಹೊರಟಕೂಡಲೆ ಹುಡುಗರಿಬ್ಬರ

ಕಣ್ಣುಗಳಿಂದಲೂ ನೀರು ಧಾರಾಕಾರವಾಗಿ ಸುರಿಯಲಾರಂಭವಾಯಿತು. ಈ ಮಕ್ಕಳ ಪರಸ್ಪರ ಸೌಹಾರ್ದವನ್ನು ನೋಡಿ ಅಲ್ಲಿದ್ದವರೆಲ್ಲರೂ ಕಣ್ಣೀರ ಸುರಿಸಿದರು.

ರಂಗರಾಜನು ಉಕ್ಕಿಬರುತ್ತಿದ್ದ ವ್ಯಸನವನ್ನು ಅಡಗಿಸಿಕೊಂಡು ಶರತ್ಕುಮಾರನನ್ನು ನೋಡಿ—ಅಯ್ಯಾ! ನನಗೆ ದೇವರು ಬೇಕಾದಹಾಗೆ ಕೊಟ್ಟಿರುವನು. ನಿನ್ನ ಹತ್ತಿರವಾದರೋ ಒಂದು ಕಾಸೂ ಇಲ್ಲ. ನೀನೇ ಇದನ್ನು ಇಟ್ಟುಕೊಂಡಿರು. ಅವುದಕ್ಕಾದರೂ ಬೇಕಾಗುವುದು, ಎಂದು ಉತ್ತರವಿತ್ತನು.

ಶರತ್—ಮಿತ್ರನೇ ! ನನಗೆ ನಿತ್ಯವೂ ಇಲ್ಲಿ ಭೋಜನೋಪಚಾರಗಳು ನಡೆವುವಲ್ಲದೆ, ತಿಂಗಳಾಗುತಲೆ ಕೈಗೆ ಸಂಬಳವೂ ಬರುವುದು. ನನ್ನ ವಿಷಯದಲ್ಲಿ ನೀನು ಕೊರಗ ಬೇಕಾದುದಿಲ್ಲ. ನನ್ನ ಜ್ಞಾಪಕಾರ್ಥವಾಗಿಯಾದರೂ ನೀನು ಇದನ್ನು ತೆಗೆದುಕೊಳ್ಳಲೇಬೇಕು. ನೀನು ತಿರಸ್ಕರಿಸುವುದರಿಂದ ನನ್ನ ಮನವು ಸಂಕಟ ಪಡುವುದು.

ರಂಗ—ಮಿತ್ರನೇ ! ನಮ್ಮಿಬ್ಬರ ಸ್ನೇಹವು ಅಲ್ಪಕಾಲದುದಾದರೂ, ನನ್ನ ಮನವು ನಿನ್ನನ್ನು ಬಿಟ್ಟಿರಲೊಲ್ಲದು. ಈಗ ನಾನು ಎಲ್ಲಿಗೆ ಹೋಗಲಿ, ಏನ ಮಾಡಲಿ, ಆರನ್ನು ಮಿತ್ರನೆಂದು ಸಂಬೋಧಿಸಲಿ; ನನಗೆ ಧೈರ್ಯ ಹೇಳುವರಾರು, ನನ್ನ ಯೋಗಕ್ಷೇಮವನ್ನು ವಿಚಾರಿಸುವವರು ತಾನೆ ಆರು ?

ಶರತ್-- ಮಿತ್ರನೇ ! ನೀನು ಅಧೀರನಾಗಬೇಡ. ಆರಾರ ಅದೃಷ್ಟವು ಹೇಗೆಹೇಗೆ ಇರುವುದೋ ಬಲ್ಲವರಾರು ? ನೀನು ವ್ಯಾಪಾರಮಾಡಿ ಕೋಟೀಶ್ವರನಾಗಬಹುದು. ಆಗ ದೈವಯೋಗವಿದ್ದರೆ, ನಿನ್ನ ಹಡಗಿಗೆ ನಾನೇ ಅಧಿಪತಿಯಾಗಬಹುದು. ಲೋಕದಲ್ಲಿ ಇಂತಹ ನಿದರ್ಶನಗಳು ಎಷ್ಟೋ ನಮ್ಮ ಕಿವಿಯಲ್ಲಿ ಕತೆಯ ರೂಪದಿಂದ ಬಿದ್ದಿರುವುವು. ನಾವು ಮುಂದಾಗುವುದನ್ನು ಚಿಂತಿಸುತ್ತಾ ಕುಳಿತುಕೊಳ್ಳಬಾರದು. ಭಗವಂತನು ತೋರಿದ ದಾರಿಯಲ್ಲಿ ಸಂಚರಿಸುವುದಾದರೆ, ಎಂದಾದರೊಂದು ದಿನ ದೈವಾನುಕೂಲ್ಯವುಂಟಾಗುವುದರಲ್ಲಿ ಅವ ಸಂಶಯವೂ ಇರಲಾರದು. ಮಿತ್ರನೇ ! ಹೋಗಿಬರುವೆನು. ವಿಶ್ವಾಸವು ಏಕರೀತಿಯಾಗಿರಲಿ. ಆಗಿಂದಾಗ ಯೋಗಕ್ಷೇಮಕ್ಕೆ ಪತ್ರವನ್ನು ಮಟ್ಟುಗೆ ಬರೆಯುತ್ತಿರಬೇಕೆಂದು ಕೋರುವೆನು.

ಶರತ್ಕುಮಾರನು ಹೀಗೆ ಹೇಳುತ್ತಿರುವಾಗಲೇ ಹಡಗು ಮುಂದಕ್ಕೆ ತೆರಳಿತು.

ರಂಗರಾಜನು ನಗರಕ್ಕೆ ಹಿಂದಿರುಗಿ ಬಂದು ತನಗೆ ಬೇಕಾದ ಬಟ್ಟೆ ಬರೆಗಳನ್ನು ಕೊಂಡು ಕೊಂಡು ಅದನ್ನು ಧರಿಸಿ ಅಂದವಾಗಿ ತೋರಿಕೊಂಡನು. ಉಳಿದ ಹಣವನ್ನು ಮಿತವಾಗಿ ವೆಚ್ಚಮಾಡುತ್ತಾ ಉದ್ಯೋಗಕ್ಕಾಗಿ ಯತ್ನ ಮಾಡತೊಡಗಿದನು. ಆವ ಕೆಲಸವೂ ಸಿಕ್ಕದೆ ಒಂದು ವಾರದ ಕಾಲವು ಕಳೆಯಿತು. ಬಳಿಕ ಒಂದು ದಿನ 'ಭಾರತನಿಧಿ' ಎಂಬ ಕೋರಿಯಲ್ಲಿ ತಿಂಗಳಿಗೆ ಹದಿನೈದು ರೂಪಾಯಿಗಳ ಸಂಬಳದ ಮೇಲೆ ಒಂದು ಕೆಲಸವು ರಂಗರಾಜನಿಗೆ ದೊರೆಯಿತು. ರಂಗರಾಜನು ತನಗೆ ಇಷ್ಟರ ಮಟ್ಟಿನ ಕೆಲಸವು ದೊರೆತುದಕ್ಕಾಗಿ ಭಗವಂತನನ್ನು ಪರಿಪರಿಯಾಗಿ ಕೊಂಡಾಡಿದ ಬಳಿಕ, ಒಬ್ಬ ಅಡುಗೊಳಜ್ಜಿಯ ಮನೆಯಲ್ಲಿ ಭೋಜನಕ್ಕೂ ವಾಸಕ್ಕೂ ತಕ್ಕ ಅನುಕೂಲ್ಯವನ್ನು ಏರ್ಪಡಿಸಿಕೊಂಡು ಪ್ರತಿನಿತ್ಯವೂ ಕಾಲಕ್ಕೆ ಸರಿಯಾಗಿ ತನ್ನ ಕೆಲಸಕ್ಕೆ ಹೋಗಿ ಬರುತ್ತಿದ್ದನು. ಹೀಗಿರಲೊಂದು ದಿನ ಗುಜರಾತಿನ ದೊಡ್ಡ ಮನುಷ್ಯನೊಬ್ಬನು ವ್ಯಾಪಾರಕ್ಕಾಗಿ ಅಲ್ಲಿಗೆ ಬಂದು ತನ್ನ ಭಾಷೆಯಲ್ಲಿ ಮಾತನಾಡಿಸ ತೊಡಗಿದನು ಆತನ ಭಾಷೆಯು ಅಲ್ಲಿ ಆರಿಗೂ ಗೊತ್ತಾಗದಿರಲು, ಆ ದೊಡ್ಡಮನುಷ್ಯನು ಅಸಹ್ಯಪಟ್ಟವನಾಗಿ ಹಿಂದಿರುಗಿ ಹೊರಟುಹೋಗುವಷ್ಟರಲ್ಲಿ ರಂಗರಾಜನು ಕಾರಣಾಂತರದಿಂದ ಅಲ್ಲಿ ಬಂದು ವಿದ್ಯಮಾನಗಳನ್ನು ಅರಿತ ಬಳಿಕ ಆ ದೊಡ್ಡಮನುಷ್ಯನೊಡನೆ ಗುಜರಾತಿನ ಭಾಷೆಯಲ್ಲಿ ಶುದ್ಧವಾಗಿ ಮಾತನಾಡಿ ದೊಡ್ಡಮನುಷ್ಯನು ನಾವಿರಾರು ರೂಪಾಯಿಗಳ ಪದಾರ್ಥಗಳನ್ನು ಬೆಲೆಗೆ ಕೊಳ್ಳುವಂತೆ ಮಾಡಿದನು. ಇದನ್ನು ಕಣ್ಣಾರೆ ನೋಡುತಿದ್ದ ಕೋರಿಯ ಯಜಮಾನನೊಬ್ಬನು ರಂಗರಾಜನನ್ನು ಹತ್ತಿರಕ್ಕೆ ಕರೆದು—ಅಯ್ಯಾ ! ನೀನಾರು ? ಎಂದು ಪ್ರಶ್ನೆಮಾಡಿದನು.

ರಂಗ—ಸ್ವಾಮಿ ! ತಮ್ಮ ಕೋರಿಯಲ್ಲಿ ನಾನು ಹೊಸದಾಗಿ ಕೆಲಸಕ್ಕೆ ಬಂದು ಸೇರಿಕೊಂಡಿರುವೆನು.

ಯಜಮಾನ—ನೀನು ಬಂದು ಎಷ್ಟು ದಿನಗಳಾದುವು ?

ರಂಗ—ಹತ್ತೆಂಟು ದಿನಗಳಾಗಿರಬಹುದು.

ಯಜ—ನೀನು ಘೂರ್ಜರ ಭಾಷೆಯನ್ನು ಬಲ್ಲೆಯಾ ?

ರಂಗ—ಬಲ್ಲೆನು.

ಯಜ—ಮತ್ತಾವಾವ ಭಾಷೆಗಳನ್ನು ಬಲ್ಲೆ ?

ರಂಗ—ನಾಲ್ಕಾರು ಭಾಷೆಗಳನ್ನು ಬಲ್ಲೆನು.

ಯಜ—ಹಿಂದಿಯ ಭಾಷೆಯನ್ನು ಬಲ್ಲೆಯಾ ?

ರಂಗೆ—ಬಲ್ಲೆನು.

ಆ ಯಜಮಾನನು ಉತ್ತರ ಹಿಂದೂಸ್ಥಾನದವನಾದುದರಿಂದ, ರಂಗ ರಾಜನ ಮಾತನ್ನು ಕೇಳಿದ ಕೂಡಲೆ ಸಂತೋಷಪಟ್ಟವನಾಗಿ, ಆತನೊಡನೆ ಹಿಂದೀ ಭಾಷೆಯಲ್ಲಿಯೇ ಮಾತನಾಡಿದನು. ರಂಗರಾಜನು ಹಿಂದೀ ಭಾಷೆ ಯಲ್ಲಿ ಆ ಯಜಮಾನನಿಗಿಂತಲೂ ಚೆನ್ನಾಗಿ ಮಾತನಾಡಿದನು. ಆನಂದದಿಂದ ಹಿಗ್ಗಿದ ಯಜಮಾನನು ರಂಗರಾಜನನ್ನು ಕುರಿತು—ಮಗು ! ನಿನಗೆ ಬಂಗಾ ಳಿಯಲ್ಲಿ ಪರಿಶ್ರಮವಿದೆಯೇ ? ಎಂದು ಕೇಳಿದನು.

ರಂಗೆ—ಬಂಗಾಳಿಯನ್ನು ನಾನು ಚೆನ್ನಾಗಿಯೂ ಬಲ್ಲೆನು.

ಯಜ—ಮಹಾರಾಷ್ಟ್ರ ?

ರಂಗೆ—ಮಹಾರಾಷ್ಟ್ರವೂ ಬರುವುದು.

ಯಜ—ತೆಲಗಾಗಲಿ, ಕನ್ನಡವಾಗಲಿ, ತಮಿಳಾಗಲಿ ಬರುವುದೋ ?

ರಂಗೆ—ತೆಲಗು, ಕನ್ನಡ, ತಮಿಳು ಎಲ್ಲವೂ ಬರುವುದು. ನಾನು ಈ ಭಾಷೆಗಳಲ್ಲೆಲ್ಲಾ ತಕ್ಕಮಟ್ಟಿಗೆ ಪರಿಚಯವನ್ನುಂಟುಮಾಡಿಕೊಂಡಿರುವುದ ರಿಂದ, ನನಗೆ ಇವುಗಳಲ್ಲಿ ಓದುವುದಕ್ಕೂ, ಬರೆವುದಕ್ಕೂ, ಮಾತನಾಡುವು ದಕ್ಕೂ ಚೆನ್ನಾಗಿಯೂ ಬರುವುದು.

ಯಜಮಾನ—ಸಂತೋಷ. ನೀನು ನಿನ್ನ ಕೆಲಸದ ಮೇಲೆ ಹೊರಡು.

ರಂಗರಾಜನು ತನಗೆ ಯೋಗಕಾಲವು ಒದಗಿಬರುತ್ತಿರುವುದೆಂದು ಆಲೋ ಚಿಸುತ್ತಾ, ತನ್ನ ಕೆಲಸದ ಮೇಲೆ ಹೊರಟು ಹೋದನು. ಮತ್ತೆ ಹದಿನೈದು ದಿನಗಳು ಕಳೆದು ಹೋದುವು. ಆದರೂ ಏನೂ ಪ್ರಯೋಜನವಾಗಲಿಲ್ಲ. "ಎಷ್ಟು ಗುಣವಿದ್ದರೂ ಋಣವಿದ್ದಷ್ಟೇ" ಎಂದು ರಂಗರಾಜನು ತನ್ನನ್ನು ತಾನು ನಿಂದಿಸಿಕೊಳ್ಳುತ್ತಾ, ಕಾಲವನ್ನು ಅತಿ ಪ್ರಯಾಸದಿಂದ ಕಳೆಯಲಾ ರಂಭಿಸಿದನು. ಮತ್ತೆ ಒಂದು ವಾರವು ಕಳೆಯಿತು. ಬಳಿಕ ಒಂದು ದಿನ ಯಜಮಾನನು ರಂಗರಾಜನನ್ನು ಕರೆಯಿಸಿಕೊಂಡು—ಮಗು ! ನಿನ್ನನ್ನು ನಮ್ಮ ಬಳಿಯಲ್ಲಿಯೇ ಇಟ್ಟುಕೊಳ್ಳಬೇಕೆಂದು ಆಲೋಚಿಸಿರುವೆವು. ಈಗ ನಿನಗೆ ಬರುತ್ತಿರುವ ಸಂಬಳವೆಷ್ಟು? ಎಂದು ಪ್ರಶ್ನೆಮಾಡಿದನು.

ರಂಗೆ—ಹದಿನೈದು ರೂಪಾಯಿಗಳು.

ಯಜ—ಇಷ್ಟು ಅಲ್ಪವಾದ ಸಂಬಳವೇ ?

ರಂಗ—ಅಹುದು, ಮಹಾಸ್ವಾಮಿ !

ಯಜ—ಸದ್ಯದಲ್ಲಿ ನಿನಗೆ ತಿಂಗಳಿಗೆ ಮೂವತ್ತು ರೂಪಾಯಿಗಳ ಸಂಬಳವನ್ನು ಏರ್ಪಡಿಸಿರುವೆನು. ಇದು ನಿನಗೆ ಸಮ್ಮತವಷ್ಟೇ ?

ರಂಗ—ಸ್ವಾಮಿ ! ನನ್ನ ಯೋಗಕ್ಷೇಮವನ್ನು ವಹಿಸಿದ ತಾವು ಇಷ್ಟವಿದ್ದಂತೆ ಮಾಡಬಹುದು.

ಯಜ—ನಿನಗೆ ಇದಕ್ಕಿಂತಲೂ ಹೆಚ್ಚಾಗಿ ಅನುಕೂಲ್ಯವನ್ನು ಕಲ್ಪಿಸಿ ಕೊಡಬೇಕೆಂದು ನನ್ನ ಮನದಲ್ಲಿರುವುದು. ನೀನು ಕೆಲವು ಕಾಲ ವಿಧೇಯ ನಾಗಿ ಕೆಲಸಮಾಡಿಕೊಂಡಿರು.

ರಂಗ—ಅಪ್ಪಣೆ.

ಈ ಮಾತನ್ನು ಕೇಳಿದ ಮೇಲೆ ಯಜಮಾನನು ರಂಗರಾಜನನ್ನು ಅವನ ಕೆಲಸದ ಮೇಲೆ ಕಳುಹಿಸಿದನು. ರಂಗರಾಜನು ತನಗೆ ಉಪಕಾರ ಮಾಡಿದ ಯಜಮಾನನಿಗೆ ಭಗವಂತನು ಮಂಗಳವನ್ನುಂಟುಮಾಡಲೆಂದು ಬಯಸು ತ್ತಾ, ತನ್ನ ಕೆಲಸದಲ್ಲಿ ಅಪ್ರಮತ್ತನಾಗಿದ್ದುಕೊಂಡಿದ್ದನು.

ರಂಗರಾಜನು ದುಂದುಗಾರಿಕೆಯ ಮನುಷ್ಯನಾಗಿರಲಿಲ್ಲ. ಜೀವನವು ಸುಮುಖವಾಗಿ ನಡೆಯುವುದೆಂದು ಹಿಗ್ಗಿ, ವ್ಯರ್ಥವಾಗಿ ಕಾಲವನ್ನು ಕಳೆ ವುದು ಅವನ ಹಣೆಯಲ್ಲಿಯೇ ಬರೆದಿರಲಿಲ್ಲ. ಕಾಲವು ದೊರೆತಾಗಲೆಲ್ಲಾ ಜ್ಞಾನಾರ್ಜನೆಯನ್ನುಂಟುಮಾಡಿಕೊಳ್ಳುತ್ತಲೂ, ಬೇಸರವಾದಾಗಲೆಲ್ಲಾ ಪ್ರಾತಸೇವನೆಗಾಗಿ ಹೊರಗೆ ಹೋಗಿ ಬರುತ್ತಲೂ, ಕಾಲವನ್ನು ಕಳೆಯು ತ್ತಿದ್ದನು.

ಹೀಗಿರಲೊಂದು ದಿನ ರಂಗರಾಜನು ಎಂದಿನಂತೆ ಪ್ರಾತಸೇವನೆಗಾಗಿ ತೆರಳಿದ್ದನು. ಆಗ ಸುಂದರವಾದ ಬಂಡಿಯೊಂದು ಆತನಿಗೆ ಅಭಿಮುಖವಾಗಿ ಬರುತ್ತಿದ್ದಿತು. ಅದರಲ್ಲಿ ಒಬ್ಬ ಸುಂದರಿಯೂ, ಶುಭ್ರವಸ್ತ್ರಧಾರಿಯಾದ ಒಬ್ಬ ಯುವಕನೂ ಕುಳಿತಿದ್ದರು. ಆ ಹೆಂಗುಸು ಹದಿನಾರು ವರ್ಷದ ತ್ರಿಪುರ ಸುಂದರಿಯಾಗಿದ್ದಳು. ರಂಗರಾಜನು ಆಕೆಯನ್ನು ನೋಡಿದನು. ನೋಡಿದ ಕೂಡಲೆ ರಂಗರಾಜನಿಗೆ ಆಕೆಯು ಪ್ರಥಮಾಧ್ಯಾಯದಲ್ಲಿನ ವಿಲಾಸಿನಿಯೆಂದು ಗೊತ್ತಾಯಿತು. ರಂಗರಾಜನು ತನ್ನನ್ನು ಉದ್ಧಾರಮಾಡಿದ ವಿಲಾಸಿನಿಯ ನ್ನು ನೋಡಿ ಬೆರಗಾಗಿ ನಿಂತುಬಿಟ್ಟನು.

ರಂಗರಾಜನು ಆಕೆಯನ್ನು ನೋಡಿದನು. ಆದರೆ ವಿಲಾಸಿನಿಯು ರಂಗ

ರಾಜನನ್ನು ನೋಡಿದಳೇ? ನೋಡಲಿಲ್ಲವೆಂದೇ ಹೇಳಬೇಕು. ರಂಗರಾಜನ ವಿಷಯವು ಆಕೆಗೆ ಜ್ಞಾಪಕವಿದ್ದರೂ, ಈತನೇ ರಂಗರಾಜನೆಂದು ನಿರ್ಧರಿಸು ವಷ್ಟು ಅವಕಾಶವು ಅವಳಿಗೆ ಇರಲಿಲ್ಲವೆಂದು ತೋರುವುದು. ಕಾರಣವೇನೆಂದರೆ—ಬೀದಿಯ ಬಿಕಾರಿಯ ವೇಷದಲ್ಲಿದ್ದ ರಂಗರಾಜನಿಗೂ ಈಗಿನ ರಂಗ ರಾಜನಿಗೂ ಅಜಗಜ ನ್ಯಾಯವಾಗಿದ್ದಿತು. ಒಂದೆರಡು ವರ್ಷಗಳ ಕಾಲದೊಳಗೆ ಪ್ರಪಂಚವೇ ರೂಪಾಂತರವನ್ನು ತಾಳುವಾಗ ರಂಗರಾಜನ ಮಾತೇನು!

ವಿಲಾಸಿನಿಯು ರೂಪಾಂತರವನ್ನು ತಾಳಿದ್ದ ರಂಗರಾಜನನ್ನು ಮರೆತಿದ್ದರೂ ಮರೆತಿರಬಹುದು, ಆದರೆ ರಂಗರಾಜನು ಮರೆಯುವುದಕ್ಕೆ ಕಾರಣವೇನೂ ಇರಲಿಲ್ಲ. ಇದಕ್ಕೆ ರಂಗರಾಜನು ವಿಲಾಸಿನಿಯನ್ನು ಆಗಿಂದಾಗ ಜ್ಞಾಪಿಸಿಕೊಳ್ಳುತ್ತಿದ್ದುದೇ ಕಾರಣವು ಇವನಂತೆಯೇ ಆಕೆಯೂ ಜ್ಞಾಪಕದಲ್ಲಿಟ್ಟುಕೊಂಡಿರಬಹುದೇ? ನೈಜವಾದ ಪ್ರೀತಿಯಿರುವುದಾದರೆ ಆರನ್ನು ಆರೂ ಮರೆಯಲು ಕಾರಣವೇನೂ ಇರಲಾರದು. ಹೀಗೆಂದ ಮೇಲೆ ವಿಲಾಸಿನಿಯು ರಂಗರಾಜನ ವಿಷಯದಲ್ಲಿ ಆವ ಅಭಿಪ್ರಾಯವನ್ನಿಟ್ಟುಕೊಂಡಿದ್ದಳೋ ಅದನ್ನು ಬಲ್ಲವರಾರು? ವಿಲಾಸಿನಿಯು ಮತ್ತೊಬ್ಬ ಯುವಕನ ಜೊತೆಯಲ್ಲಿ ವಿಹಾರಾರ್ಥವಾಗಿ ತೆರಳಿರುವಳೆಂದ ಮೇಲೆ ಹೆಂಗುಸರ ಮನಸ್ಸನ್ನು ಅರಿವುದು ಹೇಗೆ ತಾನೇ ಸಾಧ್ಯವು?

ರಂಗರಾಜನು ಈ ನೋಟವನ್ನು ತನ್ನ ಕಣ್ಣಾರೆ ನೋಡಿದನು. ತಾನು ಪ್ರೀತಿಸುತ್ತಿದ್ದ ವಿಲಾಸಿನಿಯು ಮತ್ತೊಬ್ಬನೊಡನೆ ಸರಸಸಲ್ಲಾಪದಲ್ಲಿದ್ದಳು. ಇದನ್ನು ರಂಗರಾಜನು ಹೇಗೆ ತಾನೇ ಸಹಿಸಬಲ್ಲನು? ರಂಗರಾಜನ ಆಶಾಲತೆಯು ಆಶ್ರಯವಿಲ್ಲದೆ ಕಳಚಿಕೊಂಡು ಬಿದ್ದಿತು. ಮಾಯಾವಿನಿಯರಾದ ಹೆಂಗುಸರನ್ನು ನಂಬಿಕೊಂಡಿರತಕ್ಕ ಗಂಡಸಿನಂತಹ ಮೂಢನು ಮತ್ತಾರೂ ಇರುವುದಿಲ್ಲವೆಂದು, ರಂಗರಾಜನು ಪ್ರಥಮಪಾಠವನ್ನರಿತುಕೊಂಡನು. ಇದಾದ ಬಳಿಕ ರಂಗರಾಜನ ಮನೋರಥ ಪ್ರಪಂಚವು ಮರುಮರೀಚಿಕೆಯಂತೆ ಸುಳ್ಳಾಗಿ ಪರಿಣಮಿಸಿತು.

ರಂಗರಾಜನು ದಿಕ್ಕು ತೋರದವನಾಗಿ ಮುಂದಕ್ಕೆ ತೆರಳುವುದಕ್ಕೆ ಕಾಲೇ ಬಾರದೆ, ಮತ್ತೆ ತನ್ನ ಆವಾಸಸ್ಥಾನಕ್ಕೆ ಬಂದು ಹಾಸುಗೆಯಲ್ಲಿ ಮಲಗಿದನು. ಆತನ ಮನದಲ್ಲಿ ಚಿಂತಾತರಂಗಗಳು ಒಂದರ ಮೇಲೊಂದು ಎದ್ದು ಎಲ್ಲಿಯೋ ಲೀನವಾಗಲಾರಂಭಿಸಿದುವು. ಅದರ ಸಾರಾಂಶವು ಈಬಗೆಯಾಗಿದ್ದಿತು.

"ನಾನು ವಿವೇಕವಿಲ್ಲದೆ ಆ ಹೆಂಗುಸನ್ನು ಮೋಹಿಸಬಹುದೇ ? ಮಾಡಬಾರದುದನ್ನು ಮಾಡಲು, ಆಗ ಬಾರದುದೇ ಆದೀತು. ಇಷ್ಟು ಬೇಗನೆ ನನಗೆ ವಿವೇಕೋದಯವಾದುದಕ್ಕಾಗಿ ನಾನೇ ಧನ್ಯನು. ಇದಂತಿರಲಿ. ಆಕೆಯನ್ನು ಮೋಹಿಸುವುದಕ್ಕೆ ನಾನಾರು ? ಬೀದಿಯ ಬಿಕಾರಿಯು ಭದ್ರವಂಶದ ಸುಂದರಾಂಗಿಯನ್ನು ಮೋಹಿಸುವುದು ಅದಾವ ನ್ಯಾಯವು ?

ನ್ಯಾಯವೋ ಅನ್ಯಾಯವೋ ಆಕೆಯಂತೂ ತ್ರಿಪುರ ಸುಂದರಿಯಾಗಿಯೇ ನನ್ನ ಕಣ್ಣಿಗೆ ಕಾಣಿಸುತ್ತಿರುವಳು. ರೂಪವನ್ನು ಮೋಹಿಸುವುದು ಮನುಷ್ಯ ಮಾತ್ರದವನಿಗೆ ಸಹಜವಾಗಿಯೇ ಇರುವುದು. ಪರಸ್ತ್ರೀಯನ್ನು ಮೋಹಿಸುವುದು ಶಾಸ್ತ್ರನಿಷಿದ್ಧವು. ಈಕೆಗೆ ಇನ್ನೂ ವಿವಾಹವಿಲ್ಲವೆಂದ ಮೇಲೆ, ಮೋಹಿಸುವುದರಿಂದ ದೋಷವೇನು ? ನಾನೇನೋ ಮೋಹಿಸಿದೆನು. ಅದರ ಫಲವನ್ನು ಮತ್ತೊಬ್ಬನು ಅನುಭವಿಸುವುದಾದರೆ, ಇದನ್ನು ಆರು ತಾನೇ ಸಹಿಸುವುದಕ್ಕಾದೀತು ? ನಾನು ಅಸ್ಥಾನದಲ್ಲಿ ಪ್ರೀತಿಯನ್ನು ಇಟ್ಟದುದಕ್ಕೆ ನನಗೆ ಸರಿಯಾದ ಪ್ರಾಯಶ್ಚಿತ್ತವೇ ಆಯಿತು. ಇನ್ನಾದರೂ ನಾನು ವಿವೇಕವನ್ನೇ ತಂದುಕೊಳ್ಳಬೇಕು. ಇನ್ನುಮೇಲೆ ನಾನು ಆಕೆಯನ್ನು ಪ್ರೀತಿಸುವುದಿಲ್ಲ. ನನ್ನ ಪ್ರಥಮ ಪ್ರೀತಿಯು ಒಡೆದು ಹೋದ ಮೇಲೆ, ನಾನು ಈ ಜನ್ಮದಲ್ಲಿ ಮತ್ತಾರನ್ನೂ ಮದುವೆಯಾಗೆನು ಚಕ್ರೇಶ್ವರನ ಮಗಳಾದರೂ ನನಗೆ ಪ್ರೀತಿಯನ್ನುಂಟುಮಾಡಲಾರಳು. ಇನ್ನು ನನ್ನ ಮನಸ್ಸು ಒಡೆದು ಹೋಯಿತು. ಇದೆಂದಿಗೂ ಸರಿಹೋಗದು. ಈ ಹುಣ್ಣು ಮಾಗದು, ಹಾಗೂ ನಾನು ಮಾಗುವುದಕ್ಕೆ ಬಿಡೆನು. ನಾನು ಇಂದಿನಿಂದ ಹುಚ್ಚನಾಗಿಬಿಟ್ಟೆನು. ನನಗೆ ಇನ್ನಾಗಬೇಕಾದುದೇನು ? ಎಂದಾದರೊಂದು ದಿನ ನಾನು ವಿಲಾಸಿನಿಯನ್ನು ನೋಡಿ—ವಿಲಾಸ ! ನೀನು ನನಗೆ ಪ್ರಾಣದಾನಮಾಡಿದೆ ಅದರೊಡನೆಯೇ ನನ್ನ ಪ್ರೀತಿಯನ್ನು ನಿರ್ಮೂಲ ಮಾಡಿದೆ. ಇದರಿಂದ ನನ್ನ ಜನ್ಮವೇ ದುಃಖಮಯವಾಗಿ ಹೋಯಿತು. ಇದಕ್ಕೆಲ್ಲಾ ನೀನೇ ಕಾರಣವು, ಎಂದು ಹೇಳಿ ನನ್ನ ಜನ್ಮಕ್ಕೆ ಜಲಾಂಜಲಿಯನ್ನು ಕೊಟ್ಟುಬಿಡುವೆನು."

ರಂಗರಾಜನು ಹೀಗೆಲ್ಲಾ ಚಿಂತಿಸಿ ವಿಲಾಸಿನಿಯನ್ನು ಮರೆಯುವುದಕ್ಕೆ ಯತ್ನಮಾಡಿ ನೋಡಿದನು. ಆದರೆ ಅದು ಮರೆವುದೆಂತು ? ರಂಗರಾಜನು ಮಲಗಿ ನಿದ್ರೆಮಾಡಿದರೆ ಎಲ್ಲವೂ ಮರೆತುಹೋಗುವುದೆಂದು ತಿಳಿದು ನಿದ್ರೆ ಮಾಡುವುದಕ್ಕೆ ತೊಡಗಿದನು. ವಿಲಾಸಿನಿಯಂತೆಯೇ ನಿದ್ರೆಯೂ ದೂರವಾ

ಯಿತು. ರಂಗರಾಜನು ನಿರುಪಾಯನಾಗಿ ಅತಿ ಪ್ರಯಾಸದಿಂದ ರಾತ್ರಿಯನ್ನು ಕಳೆದನು.

ಬೆಳಗಾಯಿತು. ರಾತ್ರಿಯಲ್ಲಿ ನಿದ್ದೆಯಿಲ್ಲದುದರಿಂದ ರಂಗರಾಜನ ದೇಹದ ಸ್ಥಿತಿಯು ಒಂದು ಬಗೆಯಲ್ಲಿ ಕೆಟ್ಟಿತು. ಅದರೊಡನೆಯೇ ಮನೋವ್ಯಾಪಾರವೂ ಪಲ್ಲಟವಾಯಿತು. ಬಳಿಕ ಆತನು ಆಲೋಚಿಸಿದುದೇನೆಂದರೆ—

" ನಾನು ವಿದೇಶಕ್ಕೆ ಹೊರಟು ಹೋಗಿ ಅಲ್ಲಿ ಸೈನ್ಯದಲ್ಲಿ ಸೇರಿಕೊಂಡು ಯುದ್ಧದಲ್ಲಿ ಗೆದ್ದರೆ ಸುಖಸಂಪತ್ತುಗಳನ್ನೂ, ಸತ್ತರೆ ವೀರಸ್ವರ್ಗವನ್ನೂ ಹೊಂದುವೆನು. ನಾನು ಬದುಕಿರುವುದಾದರೆ ಎಂದಾದರೊಂದು ದಿನ ಆ ಮೋಸಗಾತಿಯನ್ನು ದಂಡಿಸದೇ ಬಿಡೆನು. ಅವಳು ಮತ್ತೊಬ್ಬನ ಕೈ ಹಿಡಿದುದಕ್ಕಾಗಿ ಪಶ್ಚಾತ್ತಾಪಪಡುವಂತೆ ಮಾಡುವೆನು.

ನನಗೆ ಬುದ್ಧಿಯು ಸರಿಯಾಗಿಲ್ಲ. ನಾನು ಆಕೆಯನ್ನು ದಂಡಿಸಿ ಫಲವೇನು? ಅವಳು ನನ್ನನ್ನು ಬದುಕಿಸಿದುದಕ್ಕಾಗಿ, ಇದಲ್ಲವೇ ನನ್ನ ಪ್ರತ್ಯುಪಕಾರ! ಈಗಿನ ಸ್ಥಿತಿಯನ್ನು ನೋಡಲಾಗಿ, ಆಕೆಯು ನನ್ನನ್ನು ಬದುಕಿಸಬಾರದಾಗಿದ್ದಿತು. ನನ್ನನ್ನು ಬದುಕಿಸಿ ಈ ಸಂಕಟಕ್ಕೆ ಈಡುಮಾಡಿದುದು ಅವಳ ತಪ್ಪಲ್ಲವೇ? ಈ ತಪ್ಪಿಗೆ ಶಿಕ್ಷೆಯಾಗಲೇಬೇಕು.

ಪ್ರೇಮವೆಂಬುದು ಒಂದು ಬಗೆಯ ಹುಚ್ಚು. ಪ್ರತಿಪ್ರೀತಿಯನ್ನರಿಯದ ಪ್ರೀತಿಯು ಮನುಷ್ಯನನ್ನು ಹುಚ್ಚನನ್ನಾಗಿ ಮಾಡಿಬಿಡುವುದು. ಲೋಕದಲ್ಲಿ ಮನುಷ್ಯನು ಹುಚ್ಚಾಗುವುದಕ್ಕೆ ಅನೇಕ ಕಾರಣಗಳಿರುವುವು, ಆದರೆ ಪ್ರೀತಿಯು ಕೆಡುವುದರಿಂದುಂಟಾದ ಹುಚ್ಚು ಅಭೇದ್ಯವಾದುದು. ಇಂತಹ ಹುಚ್ಚು ಪ್ರಪಂಚವನ್ನಾದರೂ ದಹಿಸಿಬಿಡುವುದು. ಇದರ ಹಾವಳಿಯನ್ನು ತಡೆಯುವುದು ಆರಿಂದಲೂ ಸಾಧ್ಯವಲ್ಲ."

ರಂಗರಾಜನು ಹೀಗೆಲ್ಲಾ ಚಿಂತಿಸಿದ ಕೂಡಲೆ, ಅವನಿಗೆ ಆವ ಕೆಲಸದಲ್ಲಿಯೂ ಜಿಹಾಸೆ ಹುಟ್ಟಿತು. ಅವನಿಗೆ ಊಟ ಬೇಡ, ಕೆಲಸ ಬೇಡ, ಮಾತುಕತೆಗಳು ಮೊದಲೇ ಬೇಡ, ಬದುಕಬೇಕೆಂಬ ಆಸೆಯು ಆತನ ಕೈಬಿಟ್ಟಿತು. ಎಲ್ಲೆಲ್ಲಿ ನೋಡಿದರೂ ಅಂಧಕಾರವು ಕವಿದುಕೊಂಡು ಬಂದು ರಂಗರಾಜನನ್ನು ಮೂಢನನ್ನಾಗಿ ಮಾಡಿಬಿಟ್ಟಿತು.

# ಆರನೆಯ ಅಧ್ಯಾಯ.

**ಸಮುದ್ರಯಾನ. ಹಡಗಿನಲ್ಲಿ ರಾತ್ರಿಯಾಯಿತು ಚರಮಪ್ರತಿಜ್ಞೆ. ಮೋಹಿನೀಮೂರ್ತಿ. ದ್ವಿತೀಯೋದ್ಧಾರ. ಭವಿಷ್ಯದುಪದೇಶ ನೂತನವಾದ ಆಶಾಪಾಶ.**

ರಂಗರಾಜನು ಭಾರತ ನಿಧಿಯಲ್ಲಿ ಒಂದೂವರೆ ವರ್ಷಕಾಲ ಕೆಲಸಮಾಡಿಕೊಂಡಿದ್ದನು. ಆತನ ಸಂಬಳವು ಹೆಚ್ಚಲಿಲ್ಲ, ಹೆಚ್ಚುವ ಹಾಗೂ ಇರಲಿಲ್ಲ. ಇದಕ್ಕಾಗಿ ಆತನು ಭಾರತ ನಿಧಿಯನ್ನು ತ್ಯಾಗಮಾಡಿ ಹೊರಟು ಹೋಗಬೇಕೆಂದು ಸಿದ್ಧಾಂತ ಮಾಡಿಕೊಂಡನು. ಕಾರಣವೇನೆಂದರೆ—ಈತನಿಂದ ನಿಧಿಗೆ ತುಂಬಾ ಪ್ರಯೋಜನವಿದ್ದಿತೇ ಹೊರತು, ನಿಧಿಯಿಂದ ಈತನಿಗೆ ವಿಶೇಷವಾದ ಪ್ರಯೋಜನವೇನೂ ಇರಲಿಲ್ಲ. ಈ ನಿಮಿತ್ತದಿಂದ ರಂಗರಾಜನು ಒಂದು ದಿನ ನಿಧಿಯ ಯಜಮಾನನನ್ನು ನೋಡಿ—ಸ್ವಾಮಿ! ಮುಂದಿನ ತಿಂಗಳಿಂದ ನಾನು ನನ್ನ ಕೆಲಸಕ್ಕೆ ರಾಜಿನಾಮೆಯನ್ನು ಕೊಡಬೇಕೆಂದು ಸಂಕಲ್ಪಿಸಿರುವೆನು, ಎಂದು ತಿಳಿಸಿಕೊಂಡನು.

ಯಜಮಾನ— (ಆಶ್ಚರ್ಯದಿಂದ ಬೆರಗಾಗಿ) ಏನು! ನೀನು ನಮ್ಮನ್ನು ಬಿಟ್ಟು ಹೋಗುವೆಯಾ ?

ರಂಗ—ಅಹುದು, ನಾನು ಬಿಟ್ಟುಹೋಗುವೆನು.

ಯಜ—ಇದು ದೂರಾಲೋಚನೆಯಿಂದ ಆಡಿದ ಮಾತೇನು ?

ರಂಗ—ಅಹುದು.

ಯಜ—ನಮ್ಮನ್ನು ಬಿಟ್ಟು ಮುಂದೇನ ಮಾಡಬೇಕೆಂದಿರುವೆ ?

ರಂಗ—ನಾನು ಅದನ್ನು ಇನ್ನೂ ಸಿದ್ಧಾಂತಪಡಿಸಿಲ್ಲ.

ಯಜ—ನಮ್ಮನ್ನು ಬಿಡುವುದಾಗಿ ಸಿದ್ಧಾಂತ ಮಾಡಿಕೊಂಡಿರುವ ಹಾಗೆ ತೋರುವುದು.

ರಂಗ—ಅಹುದು.

ಯಜ—ಇದಕ್ಕೆ ಕಾರಣವಿರಬೇಕಲ್ಲವೇ ?

ರಂಗ—ಇರುವುದು.

ಯಜ—ಅದೇನು ?

ರಂಗ—ನಾನು ಹೆಚ್ಚಾಗಿ ಸಂಪಾದನೆಮಾಡಿ ಚೆನ್ನಾಗಿ ಬದುಕಿ ಬಾಳಬೇಕಾಗಿದೆ. ಇದಕ್ಕಾಗಿಯೇ ನಾನು ಬಿಡಬೇಕೆಂದಿರುವೆನು.

ಯಜ—ಹಾಗೆಯೇ ! ಈಗ ನಿನ್ನ ಸಂಬಳವೆಷ್ಟು?

ರಂಗ—ಮೂವತ್ತು ರೂಪಾಯಿಗಳು.

ಯಜ—ಇಷ್ಟು ದಿನಗಳಾದರೂ ನಿನ್ನ ಸಂಬಳವು ಹೆಚ್ಚಲಿಲ್ಲವೇ ?

ರಂಗ—ನನ್ನನ್ನು ಕೇಳುವವರಾರು ?

ಯಜ—ನನಗೇ ತಿಳಿಸಬೇಕಾಗಿತ್ತು.

ರಂಗ—ಅದು ನನ್ನ ಕೆಲಸವಲ್ಲ.

ಯಜ—ಇದರಲ್ಲಿ ಏನೋ ಅಚಾತುರ್ಯವು ನಡೆದಿರಬೇಕು, ಇರಲಿ. ನೀನು ನಮ್ಮಲ್ಲಿಗೆ ಬಂದು ಎಷ್ಟು ವರ್ಷಗಳಾದುವು ?

ರಂಗ—ಒಂದೂವರೆ ವರ್ಷಕ್ಕೇನೂ ಕಡಮೆ ಇಲ್ಲ. ಪ್ರಾಯಿಕವಾಗಿ ಎರಡು ವರ್ಷಗಳೇ ಆಗಿರಬಹುದು. ನಾನು ಬಂದ ದಿವಸವು ಲೆಕ್ಕದಿಂದ ಗೊತ್ತಾಗುವುದು.

ಯಜ—ನಮ್ಮಲ್ಲಿ ಆರುತಿಂಗಳಿಗೊಂದುಸಲ ಸಂಬಳವು ಹೆಚ್ಚಿಸಲ್ಪಡುವುದು. ಹೀಗಿರುವಲ್ಲಿ ನಿನಗೇನೂ ಆಗದಿರುವುದು ನೋಡಿದರೆ ನನಗೆ ತುಂಬಾ ವಿಷಾದವಾಗುವುದು. ನಿನಗೆ ಇಂದಿನಿಂದ ತಿಂಗಳಿಗೆ ಐವತ್ತು ರೂಪಾಯಿಗಳಂತೆ ಸಂಬಳವು ಸಲ್ಲಿಸಲ್ಪಡುವುದು.

ರಂಗ—ಸ್ವಾಮಿ ! ನಾನು ಇಲ್ಲಿರಲಾರೆನು.

ಯಜ—ನಿನ್ನನ್ನು ಬಿಡುವುದಕ್ಕೆ ನಮಗೆ ಇಷ್ಟವಿಲ್ಲ. ನಿನಗೆ ಅರವತ್ತು ರೂಪಾಯಿಗಳ ಸಂಬಳವನ್ನು ಏರ್ಪಡಿಸಿರುವೆನು. ಇದು ನಿನಗೆ ಸಮ್ಮತವಷ್ಟೇ ?

ರಂಗ—ಸಂಬಳದ ವಿಷಯವಾಗಿ ನಾನು ಚಿಂತಿಸುತ್ತಿಲ್ಲ. ವ್ಯಾಪಾರದಲ್ಲಿ ಗೌರವದಿಂದ ಬಾಳಬೇಕೆಂದು ನನಗೆ ತುಂಬಾ ಕುತೂಹಲವಿರುವುದು. ಅದಕ್ಕಾಗಿಯೇ ನಾನು ತೆರಳುವವನಾಗಿರುವೆನು.

ಆವನೋ ಒಬ್ಬನು ಕೋಣೆಯಿಂದ ಹೊರಗೆ ನಿಂತು ಈ ಸಂಭಾಷಣೆಯನ್ನು ಕೇಳುತ್ತಿದ್ದನು. ರಂಗರಾಜನು ಹೊರಟುಹೋಗುವನೆಂದು ಕೇಳಿ ಆತನಿಗೆ ತುಂಬಾ ಸಂತೋಷವಾದಂತೆ ಕಂಡುಬಂದಿತು. ಈ ಸುದ್ದಿಯು ಅವನ ಕಿವಿಯ ಮೇಲೆ ಬಿದ್ದ ಕೂಡಲೆ ಆತನು ಆನಂದದಿಂದ ತನ್ನ ಕೆಲಸದ ಮೇಲೆ ಹೊರಟು ಹೋದನು.

ಯಜಮಾನನು ರಂಗರಾಜನಾಡಿದ ಮಾತನ್ನು ಕೇಳಿ—ಮಗು ! ನೀನು ಹೋಗಲೇ ಬೇಕೆಂದು ಸಂಕಲ್ಪ ಮಾಡಿದಂತಿದೆ, ಎಂದು ಮತ್ತೆ ನುಡಿದನು.

ರಂಗ—ಅಹುದು, ಮಹಾಸ್ವಾಮಿ !

ಯಜ—ಹಾಗಾದರೆ ನಿನ್ನ ಏಳಿಗೆಗೆ ನಾವು ಅಡ್ಡಿಯಾಗಿ ಬರಲಾರೆವು. ಆದರೆ ನೀನು ಈಗ ದುಡುಕಿ ಮಾಡುವ ಕೆಲಸಕ್ಕೆ ಎಂದಾದರೊಂದು ದಿನ ಪಶ್ಚಾತ್ತಾಪಪಡಬೇಕಾದೀತು.

ರಂಗ—ಸ್ವಾಮಿ ! ಈಗ ನಾನು ದುಡುಕಿದ್ದರಲ್ಲವೇ ಮುಂದೆ ಪಶ್ಚಾತ್ತಾಪ ಪಡಬೇಕಾಗುವುದು. ನನ್ನಲ್ಲಿ ಅದಕ್ಕೆ ಕಾರಣವೇನೂ ಇರಲಾರದು.

ಯಜ—ಎಪ್ಪತ್ತೈದು ರೂಪಾಯಿಗಳ ಸಂಬಳವನ್ನು ಕೊಡುವುದಾಗಿ ಸದ್ಯದಲ್ಲಿ ಏರ್ಪಡಿಸುವೆನು.

ರಂಗ—ತಮ್ಮ ವಿಶ್ವಾಸಕ್ಕೆ ನಾನು ತುಂಬಾ ಕೃತಜ್ಞನಾಗಿರುವೆನು. ನಾನು ಹೊರಡಬೇಕೆಂದೇ ನಿಶ್ಚಯಿಸಿರುವೆನು.

ಯಜ—ತಿಂಗಳಿಗೆ ಒಂದು ನೂರು ರೂಪಾಯಿಗಳ ಸಂಬಳದಿಂದ ಒಂದು ದೊಡ್ಡ ಅಧಿಕಾರವು ಕೊಡಲ್ಪಡುವುದು ನೀನು ಸದ್ಯದಲ್ಲಿ ಇದನ್ನು ಒಪ್ಪಿಕೊಂಡು ಕೆಲಸಮಾಡುತ್ತಿರು. ಮುಂದಕ್ಕೆ ನಿನ್ನನ್ನು ಈ ನಿಧಿಯ ಭಾಗಸ್ಥನನ್ನಾಗಿ ಮಾಡಿಕೊಳ್ಳುವೆವು.

ರಂಗ—ತಾವು ನನ್ನನ್ನು ನಿರ್ಬಂಧಪಡಿಸಬಾರದು. ನನ್ನ ರಾಜೀನಾಮೆಯನ್ನು ತಾವು ಅಂಗೀಕರಿಸುವುದಾದರೆ, ನಾನು ತಮಗೆ ತುಂಬಾ ಕೃತಜ್ಞನಾಗಿರುವೆನು.

ಯಜ—ಮಗು ! ನನ್ನ ಮಾತನ್ನು ನೀನು ಕೇಳದ ಮೇಲೆ, ನಿನಗೆ ತೋರಿದಂತೆ ಮಾಡು.

ರಂಗರಾಜನು ತನ್ನ ಅವಧಿಯ ದಿನಕ್ಕೆ ಸರಿಯಾಗಿ ರಾಜೀನಾಮೆಯನ್ನು ಕೊಟ್ಟು, ಕೋಠಿಯ ಸಂಬಂಧವನ್ನು ಕಳೆದುಕೊಂಡು ಹೊರಹೊರಟನು.

ರಂಗರಾಜನು ಬೀದಿಯಲ್ಲಿ ಹೊರಡುತ್ತಿರುವಾಗ ಆತನ ಪ್ರಥಮ ಮಿತ್ರನ ಜ್ಞಾಪಕ ಬಂದಿತು. ಒಂದೆರಡು ಸಲ ಮಟ್ಟಿಗೆ ರಂಗರಾಜ ಶರತ್ಕುಮಾರರಿಬ್ಬರಿಗೂ ಪತ್ರವ್ಯವಹಾರವು ನಡೆದು ಬಳಿಕ ನಿಂತುಹೋಯಿತು. ಬಹುಕಾಲದಿಂದ ಶರತ್ಕುಮಾರನ ಕಾಗದವು ಬಾರದಿದ್ದುದಕ್ಕಾಗಿ ರಂಗರಾಜನು ಆತನ ವಿಷಯದಲ್ಲಿ ಪರಿಪರಿಯಾಗಿ ಚಿಂತಿಸ ತೊಡಗಿದನು. ವಿಶೇಷವಾದ ಸ್ನೇಹವಿರುವೆಡೆಗಳಲ್ಲಿ ಹೀಗೆಲ್ಲಾ ಆಗುವುದುಂಟು.

ಶರತ್ಕುಮಾರನನ್ನು ಆಗಿಂದಾಗ ಸ್ಮರಿಸಿಕೊಳ್ಳುತ್ತಾ ರಂಗರಾಜನು ಕಂಡ

ಕಂಡೆಡೆಗಳಲ್ಲೆಲ್ಲಾ ಕೆಲಸದ ನಿಮಿತ್ತವಾಗಿ ಯತ್ನಮಾಡತೊಡಗಿದನು. ಒಂದು ವಾರವು ಕಳೆವುದರೊಳಗಾಗಿ ಅವನಿಗೆ ನೆಯ್ಗೆಯ ಕಾರ್ಖಾನೆಯೊಂದರಲ್ಲಿ ಶಾಖಾಧಿಕಾರ ಪದವಿಯು ದೊರೆಯಿತು. ರಂಗರಾಜನು ತನಗೆ ಈ ಕೆಲಸವು ದೊರೆತುದಕ್ಕಾಗಿ ತುಂಬಾ ಸಂತೋಷಪಟ್ಟುಕೊಂಡು, ದ್ವಿಗುಣಿತವಾದ ಉತ್ಸಾಹದಿಂದ ತನ್ನ ಕೆಲಸಕ್ಕೆ ಹೋಗಿ ಬರುತ್ತಿದ್ದನು. ಕೆಲಸವು ದೊರೆತ ಒಂದೆರಡು ದಿನಗಳೊಳಗಾಗಿ, ರಂಗರಾಜನು ವಿಹಾರಾರ್ಥವಾಗಿ ಸಂಚರಿಸುತ್ತಿರುವಾಗ, ವಿಲಾಸಿನಿಯು ಹಿಂದೊಂದು ದಿನ ಆರೊಡನೆ ಗಾಡಿಯಲ್ಲಿ ಕುಳಿತುಕೊಂಡು ಪ್ರವಾತಸೇವನೆಗೆ ತೆರಳಿದ್ದಳೋ, ಇಂದೂ ಆಕೆಯು ಅದೇ ವ್ಯಕ್ತಿಯೊಡನೆ ಗಾಡಿಯಲ್ಲಿ ಕುಳಿತು, ಸಂತೋಷದಿಂದ ಸರಸ ಸಲ್ಲಾಪಗಳನ್ನಾಡುತ್ತಾ ತೆರಳಿದುದನ್ನು ಕಂಡನು. ರಂಗರಾಜನು ಇದನ್ನು ತಾಳಲಾರದವನಾಗಿ, ತಟ್ಟನೆ ಮನೆಗೆ ಬಂದು ಚಿಂತಿಸಿದನು—

"ಇನ್ನು ಈ ಸಂಕಟವನ್ನು ಸಹಿಸಿಕೊಂಡಾದರೂ ಇಲ್ಲಿದ್ದು ಪ್ರಯೋಜನವಿಲ್ಲ. ವಿಲಾಸಿನಿಯು ನನ್ನ ಹೊಟ್ಟೆಯುರಿಸುವುದಕ್ಕಾಗಿ ಆಗಿಂದಾಗ ಕಾಣಿಸಿಕೊಳ್ಳುತ್ತಿರುವಳು. ಆಕೆಗಿನ್ನೂ ಆತನೊಡನೆ ವಿವಾಹವಾಗಿಲ್ಲ. ವಿವಾಹದ ಸುದ್ದಿಯನ್ನು ಕೇಳಿ ನಾನು ಈ ಪ್ರಾಣವನ್ನು ಹೇಗೆ ಧರಿಸಿಕೊಂಡಿರಲಿ? ನಾನು ಇಲ್ಲಿದ್ದರಲ್ಲವೇ ಈ ವ್ಯಸನಗಳಿಂದ ಕೊರಗಬೇಕಾಗುವುದು. ನಾನು ದೇಶಾಂತರಕ್ಕೆ ಹೊರಟುಹೋದರೆ ಈ ತೊಂದರೆಗಳಾವುವೂ ನನಗಿರುವುದಿಲ್ಲ. ನನಗೆ ನಾನಾಭಾಷೆಗಳು ಬರುವುದರಿಂದ, ನನಗೆ ಆವ ದೇಶವಾದರೇನು? ಕಣ್ಮರೆಯಾಗಿ ಹೋಗುವುದೇ ಈ ವ್ಯಸನಕ್ಕೆ ತಕ್ಕ ಪ್ರತೀಕಾರವು. ಪ್ರತೀಕಾರ ಮಾಡದಿದ್ದರೆ ನಾನು ಬದುಕುವ ಸಂಭವವಿಲ್ಲ. ನಾನು ನಾಳೆಯು ಬೆಳಗಾದ ಕೂಡಲೆ, ನನ್ನ ಹೊಸ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಆ ಕೂಡಲೆಯೇ ಈ ನಗರವನ್ನು ತ್ಯಾಗಮಾಡಿಬಿಡುವೆನು. ಈ ಮನೋವ್ಯಥೆಯಾದರೋ ನನ್ನನ್ನು ಸುಟ್ಟು ಬೂದಿಮಾಡುತ್ತಿರುವುದು. ಹಾ ದೈವವೇ! ನಿನ್ನನ್ನು ಬಲ್ಲವರಾರು?"

ಬೆಳಗಾಯಿತು. ರಂಗರಾಜನು ತನ್ನ ಕಾರ್ಖಾನೆಗೆ ಹೋಗಿ ರಾಜೀನಾಮೆಯನ್ನು ಕೊಟ್ಟನು. ಇವನ ಯೋಗ್ಯತೆಯು ಆರಿಗೂ ಗೊತ್ತಿರಲಿಲ್ಲವಾಗಿ, ಇವನ ಇಷ್ಟದಂತೆ ರಾಜೀನಾಮೆಯು ಅಂಗೀಕರಿಸಲ್ಪಟ್ಟಿತು. ರಂಗರಾಜನು ಮನೆಗೆ ಬಂದು ಮುಂದಿನ ಪ್ರಯಾಣಕ್ಕೆ ತನ್ನ ಪದಾರ್ಥಗಳನ್ನು ಗಂಟು

ಕಟ್ಟಿ ಹೊರಡುವುದಕ್ಕೆ ಸಿದ್ಧನಾದನು. ಅಷ್ಟು ಹೊತ್ತಿಗೆ ನದಿಯಲ್ಲಿ ಒಂದು ಹಡಗು ಮುಂದಿನ|ಊರಿಗೆ ಹೊರಡುವುದಕ್ಕೆ ಸಿದ್ಧವಾಗಿ ನಿಂತಿದ್ದಿತು. ರಂಗ ರಾಜನು ಹೆಚ್ಚಿನ ಹಣವನ್ನು ಗಳಿಸಿಟ್ಟಿರಲಿಲ್ಲವಾದುದರಿಂದ, ಆತನು ಮೂರ ನೆಯ ತರಗತಿಯಲ್ಲಿ ಪ್ರಯಾಣಿಕನಾಗಿ ಹೊರಟನು. ಆತನು ಒಂದೊಂದು ವೇಳೆ ಪ್ರಕೃತಿಯ ಸೌಂದರ್ಯವನ್ನು ನೋಡುವುದಕ್ಕಾಗಿ ಸಂಧ್ಯಾಕಾಲಗ ಳಲ್ಲಿ ಹಡಗಿನ ಮೇಲಭಾಗಕ್ಕೆ ಬರುತ್ತಿದ್ದನು. ಇಷ್ಟಾದರೂ ಅವನ ಮನ ದಲ್ಲಿ ಶಾಂತಿಯುಂಟಾಗಲಿಲ್ಲ. ಈ ಅಶಾಂತಿಯಿಂದ ರಂಗರಾಜನು ಆರೊಡ ನೆಯೂ ಮಾತನಾಡುವುದಕ್ಕೆ ಇಷ್ಟಪಡದವನಾಗಿ, ಮುಖವನ್ನು ತಗ್ಗಿಸಿ ಕೊಂಡೇ ಇರುತ್ತಿದ್ದನು. ಹೀಗೆಯೇ ಒಂದೆರಡು ದಿನಗಳು ಕಳೆದುವು. ದಿನ ಗಳು ಕಳೆದುವೇ ಹೊರತು, ಈತನ ವ್ಯಸನವು ಕಡಮೆಯಾಗಲಿಲ್ಲ. ರಂಗ ರಾಜನು ನದಿಯಲ್ಲಿ ದುಮ್ಮಿಕ್ಕಿದಲ್ಲದೆ, ವ್ಯಸನವು ಕಡಮೆಯಾಗಲಾರದೆಂದು ಸಿದ್ಧಾಂತಪಡಿಸಿಕೊಂಡು, ರಾತ್ರಿಯಾಗುವುದನ್ನೇ ಇದಿರುನೋಡುತ್ತಿದ್ದನು. ಕ್ರಮಕ್ರಮವಾಗಿ ರಾತ್ರಿಯಾಗಲು, ರಂಗರಾಜನು ಹಡಗಿನ ಮೇಲಿನ ಭಾಗಕ್ಕೆ ಬಂದು ಸುತ್ತಲೂ ನೋಡಿದನು. ಅಲ್ಲಿ ಯಾರೂ ಇಲ್ಲದಿರುವುದನ್ನು ಕಂಡು, ನೀರಿನಲ್ಲಿ ಮುಗುಚಿಕೊಳ್ಳುವುದಕ್ಕೆ ಇದೇ ಸರಿಯಾದ ಸಮಯವೆಂದು ಭಾವಿಸಿ ಅಸ್ಫುಟಸ್ವರದಿಂದ, "ದುಃಖವು ಕಡಮೆಯಾಗುವುದಕ್ಕೆ ದಾರಿ ಯೊಂದೂ ಗೋಚರಿಸಲೊಲ್ಲದು. ಈಯಗಾಧವಾದ ಜಲರಾಶಿಯು ಸರ್ವ ದುಃಖ ನಿವಾರಕವೆಂದು ನಾನು ಕೇಳಿಬಲ್ಲೆನು. ಈಗ ನೀರಿನಲ್ಲಿ ದುಃಖ ನಿವಾರಣ ಗುಣವಿರುವುದೇ ಇಲ್ಲವೇ ಎಂಬುದನ್ನು ಪರೀಕ್ಷಿಸಿ ನೋಡುವು ದಕ್ಕೆ ಅನುಕೂಲಕಾಲವು ಒದಗಿ ಬಂದಿರುವುದು. ಇನ್ನು ತಡಮಾಡುವುದಾ ದರೆ ಮುಂದಣ ಪರಿಣಾಮವೇನಾಗುವುದೋ ಬಲ್ಲವರಾರು? ಒಂದು ವೇಳೆ ಆಜನ್ಮದುಃಖಿಯಾದ ನನಗೆ, ದುರ್ದೈವವು ದುಃಖವನ್ನು ನೀಗಿಕೊಳ್ಳುವು ದಕ್ಕೆ ಈ ಮಾರ್ಗವನ್ನೇಕೆ ತೋರಿಸಬಾರದು? ದೈವೇಚ್ಛೆಯು ಹೀಗಿರುವು ದಾದರೆ, ನಾನಾದರೂ ಮಾಡುವುದೇನು? ಭಗವಂತ! ಯೋಗ್ಯತೆಗೆ ಮೀರಿ ಬಂದ ದುಃಖವನ್ನು ತಡೆಯಲಾರದೆ, ನಾನು ಜಲಗರ್ಭವನ್ನು ಸೇರುವೆನು. ಇದರಲ್ಲಿ ನನ್ನ ಅಪರಾಧವೆಲ್ಲವನ್ನೂ ಕ್ಷಮಿಸಿ, ಮುಂದಾದರೂ ಸದ್ಗತಿಯ ನ್ನು ದಯೆಪಾಲಿಸು," ಎಂದು ಹೇಳಿಕೊಳ್ಳುತ್ತಾ ನೀರಿನಲ್ಲಿ ಮುಳುಗುವುದ ರಲ್ಲಿದ್ದನು.

ಮುಂದಾಗುವುದನ್ನರಿಯದ ಮಾನವನ ಆಲೋಚನೆಯೇ ಒಂದು; ಕಾರ್ಯಕಾರಣ ಪ್ರಪಂಚದ ನಿಯಮಕ್ಕೆ ಬದ್ಧವಾದ ದೈವದ ವಿಲಾಸವೇ ಒಂದು. ಇದನ್ನು ಅರಿಯುವುದಕ್ಕೇ ಮನುಷ್ಯನಿಗೆ ಯೋಗ್ಯತೆಯಿಲ್ಲದಿರುವಾಗ, ನಿವಾರಿಸುವ ಬಗೆಯೆಂತಹುದು? ರಂಗರಾಜನು ನೀರಿನಲ್ಲಿ ಮುಳುಗುವುದಕ್ಕೆಂದು ಕಟಿಕಟೆಯಿಂದ ಬಗ್ಗಿದಾಗ, ಆರೋ ಬೆನ್ನ ಮೇಲೆ ಕೈಯಿಟ್ಟಂತಾದುದು. ರಂಗರಾಜನ ಮೈ ಜುಮ್ಮೆನ್ನಲು, ಆತನು ಭಯದಿಂದ ಹಿಂದಿರುಗಿ ನೋಡಿದನು. ಆತನು ನೋಡಿದುದೇನು ? ವಿಲಾಸಿನಿಯೇ ಸಾಕ್ಷಾತ್ತಾಗಿ ಬಂದು, ಆತನ ಬೆನ್ನ ಮೇಲೆ ಕೈಯಿಟ್ಟದ್ದಳು. ರಂಗರಾಜನಿಗೆ ದಿಕ್ಕುಗಳೆಲ್ಲವೂ ಸುತ್ತುವಂತೆ ಕಾಣಿಸಲಾರಂಭಿಸಿದುವು. ಆತನ ಬಾಯಿ ಒಣಗಿ ಮಾತೇ ನಿಂತುಹೋಯಿತು. ಆತನ ಅಂಗಾಂಗಗಳೆಲ್ಲವೂ ಥರಥರನೆ ನಡುಗತೊಡಗಿದುವು. ವಿಲಾಸಿನಿಯು ರಂಗರಾಜನ ಈ ದುರವಸ್ಥೆಯನ್ನು ನೋಡಿ, ಆತನನ್ನು ಬಲವಾಗಿ ಹಿಡಿದುಕೊಂಡು ನಿರಪಾಯವಾದ ಸ್ಥಲಕ್ಕೆ ಬಂದಳು. ಅಷ್ಟರೊಳಗಾಗಿ ರಂಗರಾಜನು ಬೆವತು ನೀರಾಗಿ ಹರಿದುಹೋಗಿದ್ದನು. ವಿಲಾಸಿನಿಯು ಕೊಂಚಹೊತ್ತು ಶೈತ್ಯೋಪಚಾರ ಮಾಡಿದ ಬಳಿಕ, ಆತನನ್ನು ಕುರಿತು—ಆತ್ಮಹತ್ಯೆಗೆ ಮನವೊಡಂಬಟ್ಟುದೇ? ಎಂದು ಮಾತನಾಡಿಸಿದಳು. ರಂಗರಾಜನು ಇದಕ್ಕೆ ಏನೆಂದು ಉತ್ತರವಿತ್ತಾನು? ಆತನು ಆರಿಗಾಗಿ ಜನ್ಮವನ್ನು ಇಟ್ಟುಕೊಂಡಿದ್ದನೋ, ಆರಿಗಾಗಿ ಈಗ ಪ್ರಾಣ ಬಿಡುವುದಕ್ಕೂ ಸಿದ್ಧನಾಗಿದ್ದನೋ, ಅಂತಹ ವ್ಯಕ್ತಿಯೇ ಇದಿರಿನಲ್ಲಿ ಬಂದು ನಿಂತು ಈ ಪ್ರಶ್ನೆ ಮಾಡುವಾಗ, ರಂಗರಾಜನು ಏನೆಂದು ಉತ್ತರವಿತ್ತಾನು? ಆತನ ಬಾಯಲ್ಲಿ ಒಂದು ಮಾತೂ ಹೊರಡಲಿಲ್ಲ. ಮತ್ತೆ ವಿಲಾಸಿನಿಯು—ನೀರಿನಲ್ಲಿ ಮುಳುಗುವುದಕ್ಕೆ ನಿನಗೆ ಇಷ್ಟೇಕೆ ಪ್ರಯತ್ನ? ಎಂದಳು.

ವಿಲಾಸಿನಿಯು ತನ್ನನ್ನು ಸಂಪೂರ್ಣವಾಗಿ ಮರೆತಿದ್ದಳೆಂದು ತಿಳಿದಿದ್ದ ರಂಗರಾಜನು ತನ್ನ ಅನುಕೂಲವಾದ ಅಭಿಪ್ರಾಯವನ್ನು ತಟ್ಟನೆ ಮಾರ್ಪಡಿಸಿಕೊಂಡವನಾಗಿ, ಮುಗುಳುನಗೆಯನ್ನು ತಾಳಿ " ದೇವಿ " ಎಂದನು.

ವಿಲಾಸಿನಿ—ಅಹುದು, ನಾನೇ ದೇವಿ. ನೀರಿನಲ್ಲಿ ಮುಳುಗುವುದಕ್ಕೆ ನಿನಗೆ ಇಷ್ಟೇಕೆ ಪ್ರಯತ್ನ?

ರಂಗರಾಜ—ಅದು ನಿನಗೆ ಗೊತ್ತಾದುದೆಂತು ?

ವಿಲಾಸಿನಿ—ಬೆಕ್ಕು ಕಣ್ಣುಮುಚ್ಚಿ ಹಾಲ ಕುಡಿದರೆ, ಇತರರಿಗೆ ಗೊತ್ತಾಗಲಾರದೇನು ?

ರಂಗರಾಜನು ಈ ಮಾತಿಗೆ ಉತ್ತರವೀಯಲಾರದವನಾಗಿ, ಹುಚ್ಚನಂತೆ ಹೀ ಹೀ ಹೀ ಎಂದು ಗಟ್ಟಿಯಾಗಿ ನಕ್ಕನು.

ವಿಲಾಸಿನಿ—ನಡೆ, ಹೋಗುವ.

ರಂಗರಾಜ—ಹಾಗಾದರೆ ನಡೆ, ಹೋಗುವ. ನಾನು ಹೊತ್ತು ಕಳೆಯುವುದಕ್ಕಾಗಿ ಈರೀತಿಯಾಗಿ ಮಾತನಾಡಿಕೊಂಡಿರಬಹುದು. ಇದರಲ್ಲಿ ಆಶ್ಚರ್ಯವಾಗಲಿ, ತತ್ತ್ವವಾಗಲಿ ಏನಿರುವುದು ?

ವಿಲಾಸಿನಿ—ಹಾಗೆಯೇ ?

ವಿಲಾಸಿನಿಯು ಈ ಶಬ್ದವನ್ನು ಉಚ್ಚರಿಸಿದಾಗ, ಹಾಗೆಯೇ ಎನ್ನುವುದರಲ್ಲಿ ಅನೇಕಾರ್ಥಗಳು ಗರ್ಭಿತವಾಗಿದ್ದುವು.

ರಂಗರಾಜ— ಅದು ಹಾಗೆಯೇ ಸರಿ

ವಿಲಾಸಿನಿ—ಅಪಾಯಕರವಾದ ಸ್ಥಳಗಳಲ್ಲಿ ಏಕಾಕಿಯಾಗಿ ನಿಂತು ಹೀಗೆಲ್ಲಾ ಆಲೋಚಿಸಬಾರದು ಮನುಷ್ಯನ ಬುದ್ಧಿಯು ಎಲ್ಲಾ ಸಮಯಗಳಲ್ಲಿಯೂ ಒಂದೇ ರೀತಿಯಾಗಿರುವುದಿಲ್ಲ.

ರಂಗರಾಜ—ನನ್ನ ಬುದ್ಧಿಯಲ್ಲಿ ವಿಕಲ್ಪಗಳಿಗೆ ಕಾರಣವಿರಲಾರದು.

ವಿಲಾಸಿನಿ—ಕಾರಣವಿರಲಿ, ಇಲ್ಲದಿರಲಿ, ಮನೋರಥ ಪ್ರಪಂಚದಲ್ಲಿ ಮೈಮರೆತಿರುವಾಗ, ಕಾಲು ಜಾರಲು ಆರೇನ ಮಾಡುವುದಕ್ಕಾದೀತು? ನನ್ನಲ್ಲಿಯೂ ಈ ವರ್ತನೆಯೇ ?

ರಂಗರಾಜ—ನಾನು ನಿರಪರಾಧಿ.

ವಿಲಾಸಿನಿ—ಹಾಗಾದರೆ ನನಗೆ ಪ್ರಮಾಣಮಾಡಿಕೊಡಬಲ್ಲೆಯಾ ?

ರಂಗರಾಜ—ಮಾಡುವೆನು.

ವಿಲಾಸಿನಿ—ಸತ್ಯವೇ ?

ರಂಗರಾಜ—ಸತ್ಯವು.

ವಿಲಾಸಿನಿ—ಹಾಗಾದರೆ ಎಂದೂ ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಿಲ್ಲವೆಂದು ನನಗೆ ಪ್ರತಿಜ್ಞೆಯನ್ನು ಮಾಡಿಕೊಡು.

ರಂಗರಾಜ— ಅಗತ್ಯವಾಗಿಯೂ ಪ್ರತಿಜ್ಞೆ ಮಾಡಿ ಕೊಡುವೆನು. ನಾನು ಆತ್ಮಹತ್ಯೆಗೆ ಮುಂದುವರಿದು ಬಂದುದಕ್ಕಾಗಿ ನಿನ್ನ ಕ್ಷಮೆಯನ್ನು ಬೇಡುವೆನು.

ವಿಲಾಸಿನಿ—ಈಗಲಾದರೂ ನ. ಮಾತನ್ನು ಒಪ್ಪಿಕೊಳ್ಳುವೆಯಾ ?

ರಂಗರಾಜ—ಆಹಾ ! ಒಪ್ಪಿಕೊಳ್ಳುವೆನು.

ವಿಲಾಸಿನಿ—ನೀನು ನೀರಿನಲ್ಲಿ ಮಗುಚಿಕೊಳ್ಳುವುದಕ್ಕೆ ಯತ್ನಮಾಡಿರಲಿಲ್ಲವೇ ?

ರಂಗರಾಜ—ಅಹುದು; ಯತ್ನಮಾಡಿದ್ದೆನು.

ವಿಲಾಸಿನಿ—ಕಾರಣ ?

ರಂಗರಾಜ—ನಾನು ಚಿರದುಃಖಿ.

ವಿಲಾಸಿನಿ—ಇರಬಹುದು, ಆದರೆ " ಸುಖಸ್ಯಾನಂತರಂ ದುಃಖಂ | ದುಃಖಸ್ಯಾನಂತರಂ ಸುಖಂ " ಎಂಬುದನ್ನು ನೀನು ಅರಿಯೆಯಾ ?

ರಂಗರಾಜ—ನೀನು ಹೀಗೆ ಅಭಿಪ್ರಾಯಪಡುವೆಯಾ ?

ವಿಲಾಸಿನಿ—ಇದನ್ನು ಪ್ರಪಂಚವೇ ನಂಬಿರುವುದು.

ರಂಗರಾಜ—ನಾನು ಮಟ್ಟಿಗೆ ನಂಬಲಾರದವನಾಗಿರುವೆನು.

ವಿಲಾಸಿನಿ—ನೀನು ಪ್ರಪಂಚಕ್ಕೆ ಹೊರತಾದವನಲ್ಲ. ಈ ತತ್ತ್ವವು ಎಲ್ಲರಿಗೂ ಅನ್ವಯಿಸುವುದು.

ರಂಗರಾಜ—ನನಗೆ ನಂಬುಗೆ ಸಾಲದು.

ವಿಲಾಸಿನಿ—ಹಾಗಾದರೆ ಸಾಯುವುದರಿಂದ ಸುಖವುಂಟೆಂದು ನಂಬಿರುವೆಯಾ ?

ರಂಗರಾಜ—ನನಗೇನೋ ಹಾಗೆಯೇ ತೋರಿರುವುದು.

ವಿಲಾಸಿನಿ—ಅವಿವೇಕಿಯಂತೆ ಮಾತನಾಡಬೇಡ. ಹೆಂಗುಸಿಗಿರುವ ಬುದ್ಧಿಯೂ ನಿನಗಿಲ್ಲವೆಂದೇ ಹೇಳಬೇಕಾಗುವುದು.

ರಂಗರಾಜ—ಅದಂತಿರಲಿ. ನನ್ನ ದುಃಖವು ನಿವಾರಣೆಯಾಗುವ ಬಗೆ ಹೇಗೆ ?

ವಿಲಾಸಿನಿ—ಕಾಲವೇ ಸುಖದುಃಖಗಳಿಗೆ ಹೇತು; ಅದುಕಾರಣ ಕಾಲ ನಿರೀಕ್ಷಣೆಯಿಂದ ನಿನಗೆ ಕ್ಷೇಮವುಂಟು.

ರಂಗರಾಜ—ನನ್ನ ಸಂಕಟವು ನಿನಗೇನು ಗೊತ್ತು? ನನ್ನ ಸುಖ ದುಃಖಗಳಿಗೆ ಕಾರಣವಾದುದು ಕಾಲವಲ್ಲ, ಆಲೋಚಿಸಿ ನೋಡಲಾಗಿ ನೀನೇ ಕಾರಣವು.

ರಂಗರಾಜನು ಈ ಮಾತನ್ನು ಹೇಳಿದ ಕೂಡಲೆ ಎಚ್ಚೆತ್ತವನಾಗಿ, ತಾನಾರೆಂಬುದು ಆಕೆಗೆ ತಿಳಿದರೆ ಅನರ್ಥವುಂಟಾಗಬಹುದೆಂದು ಎಣಿಸಿಕೊಂಡು,

ತಾನು ಆಡಿದ ಮಾತನ್ನು ಮರೆಮಾಚುವುದಕ್ಕಾಗಿ—ದೇವಿ ! ನನ್ನ ಬುದ್ಧಿಯು ಸ್ವಾಧೀನದಲ್ಲಿ ಇಲ್ಲದಿದ್ದುದರಿಂದ, ನಾನು ಹುಚ್ಚನಂತಾಗಿ ಬಾಯಿಗೆ ಬಂದ ಹಾಗೆ ಮಾತನಾಡಿದೆನು. ನೀನು ಅದನ್ನು ಲೆಕ್ಕಿಸಲಾಗದು. ಇನ್ನು ಮೇಲೆ ನಾನು ಎಂದೆಂದಿಗೂ ಆತ್ಮಹತ್ಯೆಯನ್ನು ಸ್ವಪ್ನದಲ್ಲಿಯೂ ಸ್ಮರಿಸಲಾರೆನು, ಎಂದು ನುಡಿದನು.

ವಿಲಾಸಿನಿ—ಈ ಮಾತ ಕೇಳಿ ನನಗೆ ತುಂಬಾ ಸಂತೋಷವಾಯಿತು. ನಿನ್ನ ಮಾತು ಸತ್ಯವೆಂದು ನಾನು ನಂಬಬಹುದಷ್ಟೇ ?

ರಂಗರಾಜ—ಆವ ಅಡ್ಡಿಯೂ ಇರುವುದಿಲ್ಲ.

ವಿಲಾಸಿನಿ—ಮತ್ತೊಂದು ವಿಷಯವುಂಟು, ಅದಕ್ಕಾಗಿ ನಾಳೆಯ ಬೆಳಗ್ಗೆ ನಿನ್ನನ್ನು ಇದೇ ಸ್ಥಲದಲ್ಲಿಯೇ ನೋಡಬೇಕೆಂದು ಬಯಸುವೆನು.

ರಂಗರಾಜ—ಆಗಲಾರದು.

ವಿಲಾಸಿನಿ—ಅದೇಕೆ ?

ರಂಗರಾಜ—ನನಗೆ ಇಲ್ಲಿಗೆ ಬರಲು ಅಧಿಕಾರವಿಲ್ಲ. ನಾನು ಕಳ್ಳತನದಿಂದ ಈಗ ಇಲ್ಲಿಗೆ ಬಂದಿರುವೆನು.

ವಿಲಾಸಿನಿ—ಹಾಗಾದರೆ ನೀನಿರುವ ಸ್ಥಲಕ್ಕೇ ನಾನು ಬರುವೆನು.

ರಂಗರಾಜ—(ಬೆಚ್ಚಿ ಬಿದಂದವನಾಗಿ) ನೀನು ಹಾಗೆ ಮಾಡಲಾಗದು.

ವಿಲಾಸಿನಿ—ಹಾಗೆಂದರೇನು ? ನಾನು ಬರುವುದಕ್ಕೆ ನಿನ್ನ ಅಡ್ಡಿಯೇನು ?

ರಂಗರಾಜ—ನೀನು ಬರಕೂಡದೆಂದು ನಾನು ಅಡ್ಡಿಮಾಡುವೆನು.

ವಿಲಾಸಿನಿಯು ಬೆಳಗಿನ ಹೊತ್ತಿನಲ್ಲಿ ತನ್ನನ್ನು ಎಲ್ಲಿ ಗುರುತಿಸುವಳೋ ಎಂಬ ಶಂಕೆಯಿಂದ ರಂಗರಾಜನು ಆಕೆಯನ್ನು ಬರಕೂಡದೆಂದು ಅಡ್ಡಿಮಾಡಿದನು. ವಿಲಾಸಿನಿಯು ಈ ತತ್ತ್ವವನ್ನರಿಯದೆಯೇ ಬೇರೆಯಾಗಿ ಭಾವಿಸಿಕೊಂಡು—ನಿನ್ನ ಮಾತನ್ನು ಕೇಳಿದರೆ, ನನಗೆ ನಿನ್ನಲ್ಲಿ ಸಂಶಯವೇ ತೋರಿ ಬರುತ್ತಿರುವುದು, ಎಂದಳು.

ರಂಗರಾಜ—ಸಂಶಯಕ್ಕೇನೂ ಕಾರಣವಿರಲಾರದು. ನೀನು ನನ್ನನ್ನು ಹುಡುಕಿಕೊಂಡು 'ಬಂದರೂ, ನಾನು ಬೇರೆ ನಿನ್ನ ಕೈಗೆ ಸಿಕ್ಕತಕ್ಕವನಲ್ಲ. ನನಗಾಗಿ ನೀನು ಶ್ರಮವನ್ನು ತೆಗೆದುಕೊಳ್ಳಬೇಡ.

ವಿಲಾಸಿನಿ— (ಈ ಮಾತನ್ನು ಕೇಳಿ ಬೆಚ್ಚಿ ಬಿದಂ) ನಿನ್ನ ಮಾತು ವಿಚಿತ್ರವಾಗಿರುವುದು.

ರಂಗರಾಜ—ನನ್ನ ಮಾತು ವಿಚಿತ್ರವಾಗಿ ತೋರಿಬಂದರೂ, ನೀನು ಮಟ್ಟಿಗೆ ನನ್ನಲ್ಲಿ ಬರಲಾಗದು.

ವಿಲಾಸಿನಿ—ಒಂದು ಮಾತು.

ರಂಗರಾಜ—ಅದೇನು, ಹೇಳು ?

ವಿಲಾಸಿನಿ—ನಿನಗೆ ಕೋಪ ಬರುವುದೋ ಏನೋ ?

ರಂಗರಾಜ—ಇಲ್ಲ, ಹೇಳು.

ವಿಲಾಸಿನಿ—ಇದು ನಿಜವೋ ?

ರಂಗರಾಜ—ನಿಜ.

ವಿಲಾಸಿನಿ—ನಿನಗೆ ಧನಾಭಾವದ ತೊಂದರೆಯಿರಬಹುದು.

ರಂಗರಾಜ—ಇಲ್ಲ, ಅದೆಂದಿಗೂ ಇಲ್ಲ.

ವಿಲಾಸಿನಿ—ನನ್ನ ಸಹಾಯ್ಯವು ನಿನಗೆ ಬೇಡವೇ ?

ರಂಗರಾಜ—ಆವಶ್ಯಕವಿರಲಾರದು.

ವಿಲಾಸಿನಿ—ನೀನು ಹೀಗೆ ನುಡಿಯಬಾರದು. ಎಂದಾದರೊಂದು ದಿನ ನನ್ನ ಸಾಹಾಯ್ಯವು ನಿನಗೆ ಬೇಕಾಗದೇ ಇರದು.

ಮಹಾಶಯ ! ನನ್ನ ಮಾತನ್ನಾದರೂ ಕೇಳು. ಎಂದಾದರೊಂದು ದಿನ ನೀನು ದೊಡ್ಡಮನುಷ್ಯನಾಗುವೆಯೆಂದು ನನ್ನ ಮನದಲ್ಲಿ ಪ್ರೇರಣೆಯಾಗುತ್ತಿರುವುದು.

ರಂಗರಾಜ—ಏನು, ನಾನು ಹಾಗಾಗುವೆನೇ ?

ವಿಲಾಸಿನಿ—ಅಹುದು.

ರಂಗರಾಜ—ನಿನಗೆ ಹೇಗೆ ಗೊತ್ತು ?

ವಿಲಾಸಿನಿ—ನನಗೆ ಕಾರಣವು ಗೊತ್ತಿಲ್ಲವಾದರೂ, ಒಳಗಡೆಯಲ್ಲಿ ದೈವವು ಹೀಗೆ ಪ್ರೇರಿಸುತ್ತಿರುವುದು. ನಿನಗೆ ಕಷ್ಟಕಾಲವೆಲ್ಲವೂ ನಿವೃತ್ತಿಯಾದುದು.

ರಂಗರಾಜ—ನಾನು ನಂಬಲಾರೆನು

ವಿಲಾಸಿನಿ—ನೀನು ನಂಬು, ನಂಬದಿರು, ನಿನಗೆ ಸುಯೋಗವು ಒದಗಿ ಬರುವುದರಲ್ಲಿರುವುದು.

ರಂಗರಾಜ—ದೇವಿ ? ನಿನ್ನ ಮಾತು ಫಲಿಸಲಿ. ಒಳ್ಳೆಯ ಕಾಲವನ್ನು ಆರು ತಾನೆ ಬಯಸರು ? ಅಂತಹ ಸುಯೋಗವು ನನಗೆ ಉಂಟಾಗಲು, ಆಗ ನಿನ್ನನ್ನು ಕಂಡು ನನ್ನ ಧನ್ಯವಾದವನ್ನು ಅರ್ಪಿಸಿಕೊಳ್ಳುವೆನು.

ವಿಲಾಸಿನಿ—ಆಗಬಹುದು, ಆ ಸಮಯದಲ್ಲಿ ನಿನಗುಂಟಾಗಬಹುದಾದ ಸಂತೋಷವನ್ನು ನಾನು ಈಗ ವರ್ಣಿಸಲಾರೆನು.

ರಂಗರಾಜನು ಈ ಮಾತುಗಳ ಮರ್ಮವನ್ನರಿಯಲಾರದವನಾಗಿ ಬಲು ಹೊತ್ತು ಚಿಂತಿಸಿದ ಬಳಿಕ—ದೇವಿ! ನೀನು ನನಗಾಗಿ ಚಿಂತಿಸಬೇಕಾದುದಿಲ್ಲ. ನೀನು ನನಗೆ ಪ್ರಾಣದಾನ ಮಾಡಿರುವೆ, ಎಂದು ಹೇಳಿ ಸುಮ್ಮನಾದನು.

# ಏಳನೆಯ ಅಧ್ಯಾಯ.

ಪ್ರತಿಜ್ಞೆ. ಅಮರಾವತಿಯಲ್ಲಿ ಸಾಹಸ. ತೃತೀಯ ದರ್ಶನ. ಪುನರಾಗಮನ. ಗುಪ್ತಪೇಟಿಕಾನ್ವೇಷಣ. ಆಶೆಯಲ್ಲಿ ನಿರಾಶೆ.

ವಿಲಾಸಿನಿ—ನಿನ್ನ ಪ್ರಾಣವನ್ನು ನಾನು ರಕ್ಷಿಸಿದೆನೆಂದು ನೀನು ಅಭಿಪ್ರಾಯ ಪಡುವುದಾದರೆ ನಾನೇ ಧನ್ಯೆ. ನೀನು ಇಷ್ಟಪಡುವುದಾದರೆ, ನಾನೂ ಅದನ್ನು ಒಪ್ಪಿಕೊಳ್ಳುವೆನು.

ರಂಗರಾಜ—ನೀನು ಒಪ್ಪಲೇಬೇಕು. ಇನ್ನುಮೇಲೆ ನಾನು ಇಂತಹ ದುಷ್ಕಾರ್ಯಕ್ಕೆ ಮುಂದುವರಿಯೆನು. ಒಂದೆ ಮಾಡಿದ ತಪ್ಪಿಗಾಗಿ ನಾನು ಬಲು ಪಶ್ಚಾತ್ತಾಪ ಪಟ್ಟಿರುವೆನು. ನಿನ್ನ ಭವಿಷ್ಯದ್ವಾಣಿಯಲ್ಲಿ ನಂಬುಗೆಯನ್ನಿಟ್ಟು ಕೆಲಸಮಾಡುವೆನೇ ಹೊರತು, ಹೀಗೆ ದುಡುಕಿ ಕೆಲಸಮಾಡುವುದಿಲ್ಲ. ಇದು ಸತ್ಯವಾದ ಪ್ರತಿಜ್ಞೆ.

ವಿಲಾಸಿನಿ—ನಿನ್ನ ಹೆಸರನ್ನು ತಿಳಿಸಬಲ್ಲೆಯಾ ?

ರಂಗರಾಜ—ಆಗಲಾರದು.

ವಿಲಾಸಿನಿ—ಆಗಲಾರದೇತಕೆ ?

ರಂಗರಾಜ—ಅದರಿಂದೇನೂ ಪ್ರಯೋಜನವಿಲ್ಲ.

ವಿಲಾಸಿನಿ—ಹಾಗಾದರೆ ನಿನ್ನನ್ನು ಮುಂದಣ ಕಾಲದಲ್ಲಿ ನಾನು ಅರಿಯುವ ಬಗೆ ?

ರಂಗರಾಜ—ನಾನೇ ನಿನ್ನನ್ನು ಅರಿಯುವೆನು.

ವಿಲಾಸಿನಿ—ನನ್ನ ಹೆಸರು ನಿನಗೆ ಗೊತ್ತಿಲ್ಲದಿರುವಾಗ, ನೀನು ಹೇಗೆ ತಾನೆ ಅರಿಯಬಲ್ಲೆ ?

ರಂಗರಾಜ—ನಿನ್ನ ರೂಪವನ್ನು ನಾನು ಮರೆಯಲಾರೆ.

ವಿಲಾಸಿನಿ—ಮುಂದೆ ಒಬ್ಬರನ್ನೊಬ್ಬರು ಸಂಧಿಸುವ ಸಂಭವವೇ ಇರಲಾರದು.

ರಂಗರಾಜ—ಸಂಧಿಸಿಯೇ ಸಂಧಿಸುವೆವು. ನನ್ನನ್ನು ರಕ್ಷಿಸುವುದಕ್ಕಾಗಿ ಅದೃಷ್ಟವು ನಿನ್ನನ್ನು ಇಲ್ಲಿಗೆ ಕರೆತಂದುದು ಅದೃಷ್ಟವು ನಿನ್ನನ್ನೂ ನನ್ನನ್ನೂ ಮರೆಯದು. ದೈವಯೋಗದಿಂದ ನಾವಿಬ್ಬರೂ ಮತ್ತೆ ಸಂಧಿಸುವೆವು.

ವಿಲಾಸಿನಿ—ಹೀಗೆಯೇ ಆಗುವುದೆಂದು ನೀನು ಖಂಡಿತವಾಗಿಯೂ ಹೇಳಬಲ್ಲೆಯಾ ?

ರಂಗರಾಜ—ಹೇಳಬಲ್ಲೆನು. ಮಾತಕೊಟ್ಟು ತಪ್ಪುತಕ್ಕ ವಂಶದಲ್ಲಿ ನಾನು ಹುಟ್ಟಿಲ್ಲ.

ವಿಲಾಸಿನಿ—ನಾನೂ ಹಾಗೆಯೇ ನಂಬುವೆನು.

ಇಷ್ಟಾದ ಬಳಿಕ ರಂಗರಾಜನು ಮುಂದಕ್ಕೆ ಮಾತನ್ನು ಸಾಗಿಸದೆ ಹೊರಟೇ ಹೋದನು. ಈತನು ಕಣ್ಮರೆಯಾಗುವ ವರೆಗೂ, ವಿಲಾಸಿನಿಯು ರಪ್ಪೆ ಹಾಕದೆ ರಂಗರಾಜನನ್ನೇ ನೋಡುತ್ತಾ ನಿಂತಿದ್ದಳು.

ರಂಗರಾಜನು ಅಲ್ಲಿಂದ ಹೊರಟು ಹೋಗಿ, ತನ್ನ ಸ್ಥಾನವನ್ನು ಸೇರಿ ಪರಿಪರಿಯಾಗಿ ಚಿಂತಿಸಿದನು.—

"ದೈವವಿಲಾಸವನ್ನು ಬಲ್ಲವರಾರು ? ಈ ಸುಂದರಿಯು ನನಗೆ ಎರಡು ಸಲ ಪ್ರಾಣರಕ್ಷಣೆಯನ್ನು ಮಾಡಿದಳು. ಈಕೆಯೂ ನನ್ನಂತೆಯೇ ಇದೇ ಹಡಗಿನಲ್ಲಿ ಪ್ರಯಾಣ ಮಾಡುತ್ತಿರುವುದು ನನ್ನ ಪುಣ್ಯೋದಯದಿಂದಲೇ ಎಂದು ಹೇಳಬೇಕಾಗುವುದು. ಇದೆಲ್ಲಕ್ಕೂ ಅದೃಷ್ಟವೇ ಕಾರಣವು. ಅದೃಷ್ಟವಿರುವುದಾದರೆ ಹೀಗೆಲ್ಲಾ ನಡೆಯುವುದೆಂದು ನಾನು ಕೇಳಿ ಬಲ್ಲೆನು. ಇದೆಲ್ಲವನ್ನೂ ನೋಡಿದರೆ, ಅದೃಷ್ಟವು ನನ್ನ ಬೆನ್ನ ಬಿದ್ದಿರುವುದೆಂದು ತೋರುವುದು. ಇದು ಸತ್ಯವಾದುದಾದರೆ, ನನ್ನ ರೊಟ್ಟಿಯು ಜಾರಿ ತುಪ್ಪದಲ್ಲಿ ಬಿದ್ದಂತೆಯೇ ಸರಿ. ಆದುದು ಆಗಿಯೇ ಹೋಯಿತು. ಇನ್ನು ಮುಂದಾದರೂ ನನ್ನ ಅದೃಷ್ಟವು ಹೇಗಿರುವುದೆಂಬುದನ್ನು ಪರೀಕ್ಷಿಸಿಯೇ ನೋಡಿಬಿಡುವೆನು."

ರಂಗರಾಜನು ಈ ರೀತಿಯಾಗಿ ಬಲುಹೊತ್ತು ಚಿಂತಿಸುತ್ತಾ ತನ್ನ ಸ್ಥಳದಲ್ಲಿಯೇ ಕುಳಿತುಕೊಂಡಿದ್ದನು. ಇಷ್ಟೆನ್ನುವುದರೊಳಗಾಗಿ ಹಡಗು ರೇಣುಕಾ

ವತಿಗೆ ಬಂದು ಸೇರಿತು. ರಂಗರಾಜನು ದಡಬಡನೆಯೆದ್ದು ಬಂದು ರೇಣು ಕಾವತಿಯಲ್ಲಿ ಇಳಿಯತಕ್ಕ ಪ್ರಯಾಣಿಕರೆಲ್ಲರನ್ನೂ ಎವೆಯಿಕ್ಕದೆ ದೂರದಿಂ ದಲೇ ನೋಡಿದನು. ಈ ಸ್ಥಲದಲ್ಲಿ ವಿಲಾಸಿನಿಯು ಇಳಿಯಲಿಲ್ಲವೆಂದು ಗೊ ತ್ತಾಗಲು, ಆಕೆಯ ಗೋಚರಕ್ಕೆ ಬೀಳದೆ ಇರಲು ಇದೇ ಸರಿಯಾದ ಕಾಲ ವೆಂದೆಣಿಸಿ, ರಂಗರಾಜನು ರೇಣುಕಾವತಿಯಲ್ಲಿಯೇ ಇಳಿದುಬಿಟ್ಟನು. ವಿಲಾ ಸಿನಿಯ ಕಣ್ಣಿಗೆ ಬೀಳದ ಹಾಗೆ ದೂರವಾಗಿ ಹೋದುದಕ್ಕಾಗಿ ರಂಗರಾಜನಿ ಗುಂಟಾದ ಸಂತೋಷವನ್ನು ಹೇಳಿ ತೀರದು. ರಂಗರಾಜನ ಬಳಿಯಲ್ಲಿ ತುಂಬಾ ಹಣವಿಲ್ಲದುದರಿಂದ, ಆತನು ಕಾಲ್ನಡೆಯಿಂದಲೇ ಮುಂದಕ್ಕೆ ಪಯಣವನ್ನು ಬಳೆಯಿಸಿದನು. ಆತನ ಪ್ರಯಾಣಗಳಲ್ಲಿ ಗ್ರಂಥದಲ್ಲಿ ಬರೆದಿಡ ಬಹುದಾದ ಘಟನಾವಿಶೇಷಗಳೇನೂ ಸಂಭವಿಸಲಿಲ್ಲವಾದರೂ, ರಂಗರಾಜನು ಬಗೆಬಗೆಯಾದ ತೊಂದರೆಗಳಿಗೀಡಾಗಿ, ಕೆಲವು ಕಾಲದ ಅನಂತರದಲ್ಲಿ ಅಮ ರಾವತಿಯೆಂಬ ಅದೊಂದು ದೊಡ್ಡ ಪಟ್ಟಣಕ್ಕೆ ಬಂದು ಸೇರಿದನು.

ಅಮರಾವತಿಯನ್ನು ನೋಡಿದ ಕೂಡಲೆ, ರಂಗರಾಜನಿಗೆ ಮೊಟ್ಟಮೊ ದಲು ದಿಗಿಲಾಯಿತು. ಇಂತಹ ದೊಡ್ಡ ಪಟ್ಟಣಗಳಲ್ಲಿ ವಾಸಮಾಡಿಕೊಂಡಿ ರುವುದು ಹೇಗೆಂಬ ಆಲೋಚನೆಯೇ ಅವನ ಭೀತಿಗೆ ಕಾರಣವಾಗಿದ್ದಿತು. ಆದರೆ ಅಮರಾವತಿಯಂತಹ ವಿಲಕ್ಷಣವಾದ ಪಟ್ಟಣದಲ್ಲಿ ಬಡವ ಬಲ್ಲಿದರೆಲ್ಲ ರೂ ನಿರಾಂತಕವಾಗಿ ಜೀವಿಸಿಕೊಂಡಿರಬಹುದೆಂಬುದನ್ನು ಲೋಕಾನುಭವಿ ಯಲ್ಲದ ಯುವಕನಾದ ನಮ್ಮ ಕಥಾನಾಯಕನೇನುಬಲ್ಲನು? ಆದರೂ ನಾನಾ ಭಾಷೆಗಳನ್ನರಿತ ರಂಗರಾಜನು ಇಂತಹ ಸ್ಥಳಗಳಲ್ಲಿ ಹೇಗಾದರೂ ಜೀವಿಸ ಬಹುದೆಂಬ ಧೈರ್ಯವನ್ನು ತಾಳಿದವನಾಗಿದ್ದುದರಿಂದ, ಅವನಿಗೆ ಅಮರಾವ ತಿಯನ್ನು ನೋಡಿದ ಕೂಡಲೆ ಹೆಚ್ಚಿನ ಚಿಂತೆಗೇನೂ ಆಸ್ಪದವಾಗಲಿಲ್ಲ. 'ಕೆಟ್ಟು ಪಟ್ಟಣ ಸೇರು' ಎಂಬ ಗಾದೆಯು ಅವನ ಹೃದಯದಲ್ಲಿ ಆವಾಗ ಲೂ ಜಾಗರಿತವಾಗಿರುತ್ತಿದ್ದುದರಿಂದ, ಕೈಗೆ ನಿಧಿಯೇ ಸಿಕ್ಕಿದಂತೆ ಭಾವಿಸಿ ಆತನು ಅಮರಾವತಿಯನ್ನು ಹೊಕ್ಕು ಅಡುಗೂಳಜ್ಜಿಯೊಬ್ಬಳ ಮನೆಯಲ್ಲಿ ಒಂದು ಹೊತ್ತಿನ ಊಟಕ್ಕೆ ಏರ್ಪಡಿಸಿಕೊಂಡನು.

ಹೀಗೆಯೇ ಒಂದೆರಡು ವಾರಗಳು ಕಳೆಯುವುದರೊಳಗಾಗಿ ಸುಂಕದ ಕಟ್ಟೆಯಲ್ಲಿ ಅವನಿಗೊಂದು ಸಣ್ಣ ನೌಕರಿಯು ದೊರೆಯಿತು. ಸಮಯದಲ್ಲಿ ಸಿಕ್ಕಿದಷ್ಟಕ್ಕೆ ಸಂತೋಷಪಡತಕ್ಕ ರಂಗರಾಜನು ತನ್ನ ಸಂಬಳವನ್ನು ಜೀವ

ನಕ್ಕಾಗಿ ವೆಚ್ಚ ಮಾಡುತ್ತಾ ತನ್ನಲ್ಲಿದ್ದುದನ್ನು ಭದ್ರಪಡಿಸಿ ಹೇಗೋ ಹಾಗೆ ಕಾಲವನ್ನು ಕಳೆಯಲಾರಂಭಿಸಿದನು. ಒಂದು ವರ್ಷದ ಕಾಲವಾದರೂ ಅಮ ರಾವತಿಯಲ್ಲಿದ್ದು ತನ್ನ ಅದೃಷ್ಟವನ್ನು ಪರೀಕ್ಷಿಸಬೇಕೆಂದು ಆತನಿಗೆ ಆಸೆ ಯಿದ್ದಿತಾದುದರಿಂದ, ರಂಗರಾಜನು ಅದಕ್ಕೆ ತಕ್ಕ ಹಾಗೆ ಅಣಿಮಾಡ ತೊಡ ಗಿದನು.

ಹೀಗೆಯೇ ಆರು ತಿಂಗಳ ಕಾಲವು ಕಳೆದುದು ಒಂದಾನೊಂದು ದಿನ ಹಗಲು ಕಳೆದು ರಾತ್ರಿಯಾಗುತ್ತಿರುವಲ್ಲಿ, ರಂಗರಾಜನು ವಿಹಾರಾರ್ಥವಾಗಿ ಪ್ರಮದ ವನಕ್ಕೆ ಹೋಗಿ ಹೊತ್ತು ಮುಳುಗಿದ ಕೂಡಲೆ ಮನೆಗೆ ಹಿಂದಿರುಗಿ ಬರುತ್ತಿದ್ದನು ಆಗ ಅವಗುಂಠನ (ಬುರುಕಿ) ವತಿಯಾದ ಯುವತಿಯೊಬ್ಬಳು ದಾರಿಯಲ್ಲಿ ಸಡಗರದಿಂದ ತಪ್ಪುಹಜ್ಜೆಗಳನ್ನಿಡುತ್ತಾ ಹೋಗುತ್ತಿದ್ದಳು. ಅವಳ ಆ ಬಗೆಯಾದ ನಡಗೆಯಿಂದ ಭಯವು ಸೂಚಿತವಾಗುತ್ತಿದ್ದಿತು. ಇದಕ್ಕೆ ಕಾರಣವೇನಿರಬಹುದೆಂದು ರಂಗರಾಜನು ನೋಡುತ್ತಿದ್ದ ಹಾಗೆಯೇ ಅಮರಾವತಿಯ ಯುವಕನೊಬ್ಬನು ಆಕೆಯನ್ನು ಹಿಂಬಾಲಿಸಿಕೊಂಡು ಬಂದ ನು. ಇದರ ತತ್ತ್ವವನ್ನು ಪರೀಕ್ಷಿಸುವುದಕ್ಕಾಗಿ ರಂಗರಾಜನೂ ಅವರ ಹಿಂದೆ ಹಿಂದೆಯೇ ತೆರಳಿದನು.

ಯುವತಿಯು ತನ್ನ ಮನೆಗೆ ಹೋಗುವುದಕ್ಕೆಂದು ಸಣ್ಣದಾದದೊಂದು ಗಲ್ಲಿಗೆ ತಿರುಗಿದಳು. ಆ ಯುವಕನೂ ಆ ಗಲ್ಲಿಗೆ ನುಗ್ಗಿ ಅಲ್ಲಿ ಇತರರಾರೂ ಇಲ್ಲದಿರುವುದನ್ನು ಕಂಡು ಆಕೆಯ ಕೈಗಳನ್ನು ಹಿಡಿದುಕೊಂಡನು. ಯುವ ತಿಯು ಕೂಗಿಕೊಂಡರೆ ಗಲಭೆಯಾಗುವುದೆಂದು ತಿಳಿದು ಸುಮ್ಮನಿದ್ದಳು. ಆ ಯುವತಿಯು ಕೂಗಿಕೊಳ್ಳದೇ ಇದ್ದುದರಿಂದ ಸಮ್ಮತಿಸಿದಳೆಂದು ತಿಳಿದು, ಆ ಯುವಕನು ಆಕೆಯನ್ನು ಚುಂಬಿಸುವುದಕ್ಕೆ ಮುಂದುವರಿದನು. ಈ ಅತ್ಯಾಚಾರವನ್ನು ನೋಡಿ ಸಹಿಸಲಾರದ ರಂಗರಾಜನು ತಟ್ಟನೆ ಓಡಿ ಬಂದು ಯುವಕನನ್ನು ಹಿಡಿದೆಳೆದು ಅವನ ಬೆನ್ನ ಮೇಲೆ ಬಲವಾಗಿ ಒದೆದ ನು. ಆ ಪೆಟ್ಟನ್ನು ತಾಳಲಾರದೆ ಯುವಕನು ನೆಲದ ಮೇಲೆ ಬಿದ್ದು ಮೂ ರುರುಳಾಗಿ ಉರುಳಿದರೂ, ರಂಗರಾಜನು ಬಿಡದೆ ಆತನನ್ನು ಒಂದೇ ಉಸಿರಿ ನಿಂದ ಒದೆದು ಒದೆದು ನಿಶ್ಚೇಷ್ಟಿತನನ್ನಾಗಿ ಮಾಡಿಬಿಟ್ಟನು.

ಬಳಿಕ ಯುವತಿಯು ತನ್ನನ್ನು ಉದ್ಧಾರ ಮಾಡಿದವನಾರೆಂಬುದನ್ನು ಅರಿ ವುದಕ್ಕಾಗಿ ತನ್ನ ಅವಗುಂಠನವನ್ನು ಓರೆ ಮಾಡಿದಳು. ಆಕೆಗೆ ಮರೆಯಲ್ಲಿ

ನಿಂತಿದ್ದ ವ್ಯಕ್ತಿಯು ಆರೆಂಬುದು ಗೋಚರಿಸದಿದ್ದರೂ, ದೀಪಕ್ಕೆ ಇದಿರಾಗಿ ನಿಂತಿದ್ದ ಆಕೆಯು ರಂಗರಾಜನ ಕಣ್ಣಿಗೆ ಚೆನ್ನಾಗಿಯೂ ಗೋಚರಿಸಿದಳು. ರಂಗರಾಜನು ಆಕೆಯನ್ನು ನೋಡಿದ ಕೂಡಲೆ ಬೆಚ್ಚಿಬೆದರಿದವನಾಗಿ ದೂರ ಸರಿದು ನಿಂತನು. ಆತನು ಹೀಗೆ ಮಾಡಿದುದಕ್ಕೆ ಆಕೆಯು ವಿಲಾಸಿನಿಯೆಂದು ತಿಳಿದು ಬಂದುದೇ ಕಾರಣವು. ರಂಗರಾಜನು ದೈವದ ವಿಚಿತ್ರಲೀಲೆಯನ್ನು ನೋಡಿ ಅಚ್ಚರಿಗೊಂಡು ಕ್ಷಣಕಾಲ ಸುಮ್ಮನಿದ್ದ ಬಳಿಕ, ಆಕೆಯು ತನ್ನನ್ನು ಗುರುತಿಸದೇ ಇದ್ದುದಕ್ಕಾಗಿ ತನ್ನ ಅದೃಷ್ಟವನ್ನು ಪರಿಪರಿಯಾಗಿ ಕೊಂಡಾಡುತ್ತಾ ಆ ಯುವತಿಯನ್ನು ಕುರಿತು—ಎಲೌ ಕೋಮಲಾಂಗಿ ! ಇನ್ನು ನೀನು ಆತನಿಗೆ ಹೆದರಬೇಕಾದುದಿಲ್ಲ. ಆ ದುಷ್ಟನಿಗೆ ಸರಿಯಾದ ದಂಡನೆಯೇ ಆಗಿರುವುದು, ಎಂದನು.

ಯುವತಿ—ಮಹಾಶಯ ! ನಿನ್ನ ಮಾತಿನಿಂದ ನೀನು ರಾಜನಗರದವನೆಂದು ತೋರಿಬರುತ್ತಿರುವುದು. ನನ್ನನ್ನು ಉದ್ಧಾರಮಾಡಿದ ಅವ್ಯಾಜಬಂಧುವಾದ ನಿನಗೆ ಅನೇಕ ವಂದನೆಗಳು.

ರಂಗರಾಜ—ಅಹುದು, ನಾನು ರಾಜನಗರದವನೇ ಸರಿ. ನಾನು ಸಮೀಪದಲ್ಲಿಯೇ ಬರುತ್ತಿದ್ದುದರಿಂದ, ಆ ಯುವಕನ ಅತ್ಯಾಚಾರವನ್ನು ಸಹಿಸಲಾರದವನಾಗಿ ಈ ಕಾರ್ಯದಲ್ಲಿ ಮುಂದುವರಿಯಬೇಕಾಯಿತು. ಇದಕ್ಕಾಗಿ ನೀನು ನನ್ನನ್ನು ಶ್ಲಾಘಿಸಬೇಕಾದುದೇನೂ ಇರುವುದಿಲ್ಲ.

ಯುವತಿ—ಮಹಾಶಯ ! ನಾನೂ ರಾಜನಗರದ ಯುವತಿಯು. ನನಗೆ ಒದಗಿ ಬಂದಿದ್ದ ಇಂದಿನ ವಿಪತ್ತು ನಿನ್ನಿಂದ ತೊಲಗಿದುದು. ದೇವರು ನಿನಗೆ ಉತ್ತರೋತ್ತರಾಭಿವೃದ್ಧಿಯನ್ನುಂಟುಮಾಡಲಿ.

ರಂಗರಾಜ—ಎಲೌ, ನಿನ್ನ ಮಂಗಳಾಕಾಂಕ್ಷೆಗೆ ನಾನು ಧನ್ಯನಾಗಿರುವೆನು. ಇನ್ನು ನೀನೊಬ್ಬಳೇ ಮನೆಗೆ ಹೋಗಬಲ್ಲೆಯಾ ?

ಯುವತಿ—ಮನೆಯು ಹತ್ತಿರದಲ್ಲಿರುವುದರಿಂದ, ನನಗೆ ಇನ್ನಾವ ಭಯವೂ ಇಲ್ಲ.

ರಂಗರಾಜನು ಈ ಮಾತನ್ನು ಕೇಳಿ "ಹಾಗಾದರೆ ಹೋಗಿಬರುವೆನು, ವಿಶ್ವಾಸವಿರಲಿ" ಎಂದು ನಸುನಗೆಯಿಂದ ಮಾತನಾಡಿದ ಬಳಿಕ, ಬಂದ ದಾರಿಯನ್ನು ಹಿಡಿದು ಬೇಗಬೇಗನೆ ಹೊರಟುಹೋದನು. ದಾರಿಯಲ್ಲಿ ಹೋಗುತ್ತಾ ರಂಗರಾಜನು ಆಲೋಚಿಸಿದನೇನೆಂದರೆ—

" ಇದೇನಚ್ಚರಿ ! ದೈವವು ನನ್ನನ್ನು ಅಡಿಗಡಿಗೂ ಹೀಗೆ ಬೆನ್ನಟ್ಟಿ ಬರುತ್ತಿರುವುದು. ಇಂತಹ ಅಪರಿಚಿತವಾದ ಸ್ಥಳದಲ್ಲಿ ಈಕೆಯ ಸಂದರ್ಶನವೆಂದರೇನು ? ಇದೇನು ಸತ್ಯವೋ, ಮಾಯೆಯೋ, ಮನದ ಭ್ರಾಂತಿಯೋ ? ಸತ್ಯವಾಗಿಯೂ ಆಕೆಯು ವಿಲಾಸಿನಿಯೇ ಸರಿ. ಅದರಲ್ಲಿ ಕೊಂಚವಾದರೂ ಸಂಶಯವಿಲ್ಲ. ವಿಲಾಸಿನಿಯ ಸುಂದರ ರೂಪವು ನನ್ನ ಕಣ್ಣಿಗೆ ಕಟ್ಟಿದಂತಿರುವಾಗ, ಈಕೆಯು ವಿಲಾಸಿನಿಯಲ್ಲವೆಂಬುದು ಅದಾರು ಆಡುವ ಮಾತು ? ನಾನು ಆಕೆಯನ್ನು ನೋಡಿದುದು ಇದು ಮೂರನೆಯ ಸಲ. ಎರಡು ಸಲ ಆಕೆಯು ನನ್ನ ಪ್ರಾಣವನ್ನು ರಕ್ಷಿಸಿದಳು. ಈಸಲ ನಾನು ಆಕೆಯನ್ನು ದುಷ್ಟನ ಭಯದಿಂದ ತಪ್ಪಿಸಬೇಕಾಯಿತು. ಎಲ್ಲಿ ರಾಜನಗರ, ಎಲ್ಲಿ ಹಡಗು, ಎಲ್ಲಿ ಅಮರಾವತಿ ! ದೈವಕ್ಕೆ ಕಾಲದೇಶಗಳ ಅಂತರವೆಂಬುದೇ ಇಲ್ಲವೆಂದು ತೋರುವುದು.

ದೈವವು ನಮ್ಮಿಬ್ಬರನ್ನೂ ಆಗಿಂದಾಗ ಒಟ್ಟುಗೂಡಿಸುತ್ತಿರುವುದನ್ನು ನೋಡಿದರೆ, ಇದರಲ್ಲಿ ನಮಗೆ ಗೋಚರಿಸದ ವೈಚಿತ್ರ್ಯವೇನೋ ಅಡಗಿರಬೇಕು. ಇದು ದೈವದ ಲೀಲೆಯಿರಬಹುದೇ ? ನಾನು ನಂಬೆನು. ಆಕಸ್ಮಿಕವಾಗಿ ಸಂಭವಿಸಿದುದನ್ನು ದೈವದ ಮೇಲೆ ಅದೇಕೆ ಒರಗಿಸಬೇಕು? ಸುಂಕದ ಕಟ್ಟೆಯ ಬಡನೌಕರನಿಗೂ ಲಕ್ಷಾಧಿಪತಿಯ ಕುವರಿಯಾದ ಈ ಯುವತಿಗೂ ಸಂಬಂಧವನ್ನು ಕಲ್ಪಿಸುವಷ್ಟು ಮೂಢನು ವಿಧಿಯು ತಾನಲ್ಲ. ವಿಧಿಯು ನಮ್ಮಗಳ ವಿಷಯದಲ್ಲಿ ಆವ ಅಭಿಪ್ರಾಯದಿಂದ ವರ್ತಿಸುತ್ತಿರುವನೋ ಬಲ್ಲವರಾರು ? ನನ್ನ ದುರ್ದಶೆಯಾದರೋ ದೈವಕ್ಕೂ ಮೀರಿದುದಾಗಿಯೇ ಇರುವುದು.

ಇಂತಹ ರೂಪವತಿಯಾದ ಯುವತಿಯು ಇನ್ನೂ ವಿವಾಹವಿಲ್ಲದೆಯೇ ಇರುವಳೇ ? ಒಂದು ವೇಳೆ ವಿವಾಹವಿಲ್ಲದಿದ್ದರೂ, ಇವಳನ್ನು ವಿವಾಹವಾಗಲು ನೂರಾರು ಯುವಕರು ಬಾಗಿಲಲ್ಲಿ ಕಾದುಬಿದ್ದೇ ಇರುವರು—ಎಂದ ಮೇಲೆ, ನಾನು ಈಕೆಯಲ್ಲಿ ಪ್ರೀತಿಯನ್ನಿಟ್ಟು ಕೊರಗುವುದು ಅದಾವ ಧರ್ಮ? ಯೋಗ್ಯತೆಗೆ ಮೀರಿದ ವಸ್ತುವನ್ನು ಬಯಸುವುದು ಮನೋರಥದ ವ್ಯರ್ಥವಾದ ಕೆಲಸವೇ ಹೊರತು ಮತ್ತು ಬೇರೆಯಲ್ಲ. ಈಕೆಯು ಮತ್ತೊಬ್ಬನನ್ನು ಪ್ರೀತಿಸುತ್ತಿರುವುದಾದರೆ, ಈಕೆಯನ್ನು ನಾನು ಬಯಸುವುದು ಪರಸ್ತ್ರೀಯನ್ನು ಬಯಸಿದ ಮಹಾಪಾತಕಕ್ಕೆ ಸರಿಹೋಲುವುದು. ಅದುಕಾರಣ

ನಾನು ಇನ್ನು ಮೇಲೆ ಆಕೆಯ ಸ್ಮರಣೆಯನ್ನೇ ಮಾಡೆನು. ಇಂದಿನ ವರೆಗೂ ನಾನು ಆಕೆಗಾಗಿ ಕೊರಗಿದುದೇ ಫಲವು. ಇನ್ನು ನಾಕು ಅಡಿಗಡಿಗೂ ಈಕೆಯನ್ನು ನೋಡುವುದರಿಂದ ವ್ಯಥೆಯು ಹೆಚ್ಚುವುದೇ ಹೊರತು ಕಡಮೆಯಾಗುವ ಸಂಭವವಿರಲಾರದು ಏತಕ್ಕಾಗಿ ನಾನು ಇವಳನ್ನು ನೋಡಬೇಕು ? ಈಕೆಯು ನನ್ನ ಕಣ್ಣಿಗೆ ಬೀಳದಂತೆ ಎಚ್ಚರಿಕೆಯಿಂದಿರುವುದೇ ಲೇಸು. ಅಕಟಕಟಾ ! ನನ್ನ ಆಸೆಯೆಲ್ಲವೂ ನೀರಿನಲ್ಲಿ ಹೋಮಮಾಡಿದಂತಾದುದು. ನಾನೇತಕೆ ಸಾಯಬಾರದು ? ಇಲ್ಲ, ಇಲ್ಲ; ನಾನು ಸಾಯುವುದಿಲ್ಲವೆಂದು ಮಾತಕೊಟ್ಟಿರುವೆನು. ಆದುದರಿಂದಲೇ ನಾನು ಸಾಯುವುದಕ್ಕೆ ಪ್ರಯತ್ನ ಪಡಲಾರೆನು. ನಾನು ಬದುಕಿ ಕಷ್ಟಗಳನ್ನಾದರೂ ಅನುಭವಿಸುವೆನೇ ಹೊರತು, ಆತ್ಮಹತ್ಯೆಯನ್ನು ಮಾಡಿಕೊಂಡು ನರಕಭಾಜನವಾಗಲಾರೆನು "

ರಂಗರಾಜನು ಹೀಗೆಲ್ಲಾ ಆಲೋಚಿಸಿದ ಬಳಿಕ ತನ್ನ ಕೆಲಸದ ಮೇಲೆ ತೆರಳಿದನು. ಆತನು ಎಂದಿನಂತೆ ತನ್ನ ನಿತ್ಯಕೃತ್ಯಗಳನ್ನು ಹೇಗೋ ಹಾಗೆ ನೆರವೇರಿಸುತ್ತಾ ದಿನಗಳನ್ನು ಅತಿಪ್ರಯಾಸದಿಂದ ತಳ್ಳುತ್ತಿದ್ದನು

ಹೀಗಿರಲೊಂದು ದಿನ ರಂಗರಾಜನು ತನ್ನ ಮನೆಯಲ್ಲಿ ತಾನೊಬ್ಬನೇ ಕುಳಿತು ಆವಾವುದನ್ನೋ ಆಲೋಚಿಸುತ್ತಿರುವಾಗ ತಟ್ಟನೆ ಅದೊಂದು ವಿಷಯವು ಜ್ಞಾಪಕಕ್ಕೆ ಬಂದಿತು. ಇನ್ನು ಕೆಲವು ತಿಂಗಳುಗಳೊಳಗಾಗಿ ತನಗೆ ಇಪ್ಪತ್ತೊಂದನೆಯ ವರ್ಷವು ಕಳೆಯುವುದೆಂದೂ, ಆಕೂಡಲೆ ಗುಪ್ತಪೇಟಿಕೆಯನ್ನು ಹೊರಗೆ ತೆಗೆದು ಅದನ್ನು ನಿಕ್ಷೇಪರಕ್ಷಣ ಸಮಿತಿಯ ಮುಖ್ಯಾಧಿಕಾರಿಯ ಕೈಗೆ ಕೊಡಬೇಕೆಂದೂ ರಂಗರಾಜನ ಮನದಲ್ಲಿ ಹೊಳೆಯಿತು. ಬಳಿಕ ಅವನು ತನ್ನಲ್ಲಿ ತಾನು ಮಾತನಾಡಿಕೊಂಡುದೇನೆಂದರೆ—

" ನಾನು ಮತ್ತೆ ರಾಜನಗರಕ್ಕೆ ಹೋಗಬೇಕೇನು ? ಅಲ್ಲಿಂದ ಎಂಬತ್ತು ಮೈಲಿಗಳ ದಾರಿಯನ್ನು ಸಾಗಿ ರಾಮಿಲಾಪುರಕ್ಕೆ ಹೋಗಿ ಆ ಗುಪ್ತಪೇಟಿಕೆಯನ್ನು ಹೊರಗೆ ತೆಗೆಯಬೇಕೇನು ? ಅದನ್ನು ಹೊರಗೆ ತೆಗೆಯುವುದರಿಂದ ನನಗಾಗುವ ಲಾಭವೇನು ? ಆ ಪೆಟ್ಟಿಗೆಯಲ್ಲಿರುವ ಮೊಹರಿನ ಕಾಗದವನ್ನು ನಿಕ್ಷೇಪರಕ್ಷಣ ಸಮಿತಿಗೆ ಕೊಟ್ಟರೆ ಅವರೊಂದು ಪೆಟ್ಟಿಗೆಯನ್ನು ಕೊಡುವರಂತೆ. ಆ ಪೆಟ್ಟಿಗೆಯಲ್ಲಿರುವುದು ತಾನೇ ಏನು ? ಒಂದು ವೇಳೆ ಅದರಲ್ಲಿ ಉಪದೇಶವಾಕ್ಯಗಳ ಕಾಗದವೊಂದಿದ್ದರೂ ಇರಬಹುದು. ಈಗ ನನಗೆ ಆ ಉಪದೇಶಗಳಿಂದಾಗುವುದು ತಾನೇ ಏನಿರುವುದು ? ನನ್ನ ಮನವು ಈಗ

ಸ್ತ್ರೀವ್ಯಾಮೋಹದಲ್ಲಿ ಮುಳುಗಿ ತೇಲುತ್ತಿರುವಲ್ಲಿ, ಆರ ಉಪದೇಶ ತಾನೇ ಮನಮುಟ್ಟೀತು ? ವಿಲಾಸಿನಿಯು ನನ್ನ ಕಣ್ಣಿಗೆ ಬೀಳದ ಹಾಗೆ, ವೃದ್ಧ ಪಿತನು ತಕ್ಕ ಏರ್ಪಾಡು ಮೊದಲೇ ಮಾಡಿದ್ದಿದ್ದರೆ, ನನಗೆ ಇಂತಹ ದುರ್ದಶೆಯೇ ಉಂಟಾಗುತ್ತಿರಲಿಲ್ಲ. ಈಗ ನಾನು ಗತಿಸಿ ಹೋದ ಆ ವಿಲಕ್ಷಣಸ್ವಭಾವದ ಮುದುಕನ ಮೇಲೆ ತಪ್ಪನ್ನು ಹೊರಿಸುವುದು ತರವಲ್ಲ. ಆತನು ನನಗಾಗಿ ಎಷ್ಟೋ ಶ್ರಮಪಟ್ಟನು. ಅಂಥವನ ಮರಣಕಾಲದಲ್ಲಿ ನಾನು ಕೊಟ್ಟ ಬಾಸೆಯನ್ನು ಈಗ ತಪ್ಪುವುದೆಂದರೇನು ? ನಾನು ಖಂಡಿತವಾಗಿಯೂ ಆತನ ಮಾತಿನಂತೆಯೇ ನಡೆದುಕೊಳ್ಳಬೇಕು. ದೊಡ್ಡವರ ಮಾತು ನಮಗೆ ಆವಾಗಲೂ ಶಿರೋಧಾರ್ಯವಾದುದು. ಅನೇಕ ಯುವಕರು ದೊಡ್ಡವರ ಹಿತೋಕ್ತಿಗಳಿಗೆ ಕಿವಿಗೊಡದೆಯೇ ಲೋಕದಲ್ಲಿ ಹಡುಪಾಡಿಗೀಡಾಗಿ ಹೋಗಿರುವರು. ಲೋಕದಲ್ಲಿ ಬದುಕಿ ಬಾಳಿ ಹೆಸರ ಹೇಳದಂತಹ ದುಷ್ಟಬಾಲಕರ ಸುದ್ದಿ ನನಗೇತಕೆ ? ನನ್ನ ಇಪ್ಪತ್ತೊಂದನೆಯ ವಯಸ್ಸು ಪೂರ್ಣವಾಗುವುದರೊಳಗಾಗಿ ಕಾಮಿಲಾಪುರಕ್ಕೆ ಹೋಗಿ ಅಲ್ಲಿ ಅವಿತಿಟ್ಟದ್ದ ಪೆಟ್ಟಿಗೆಯನ್ನು ಹೊರಗೆ ತೆಗೆದು ಅದರಿಂದ ಆವ ಪ್ರಯೋಜನವಾಗುವುದೆಂಬುದನ್ನಾದರೂ ಪರೀಕ್ಷಿಸಿ ನೋಡಿಬಿಡುವೆನು."

ರಂಗರಾಜನು ಈ ಬಗೆಯಾಗಿ ಆಲೋಚಿಸಿದ ಬಳಿಕ ತನ್ನ ತಂದೆಯ ಮಾತನ್ನು ನೆರವೇರಿಸುವುದಕ್ಕಾಗಿ ಕಾಮಿಲಾಪುರಕ್ಕೆ ಹೋಗಲೇಬೇಕೆಂದು ನಿರ್ಧರಮಾಡಿಕೊಂಡನು. ಕೂಡಲೆಯೇ ಆತನು ತನ್ನ ಗಂಟುಮೂಟೆಗಳನ್ನು ಕಟ್ಟಿ ಅಂದಿನ ದಿನವೇ ರಾಜನಗರಕ್ಕೆ ತೆರಳುವ ಮೊದಲನೆಯ ಬಂಡಿಯನ್ನೇರಿ ಪಯಣ ಮಾಡಿದನು.

ರಂಗರಾಜನು ಯಥಾಸಮಯದಲ್ಲಿ ರಾಜನಗರವನ್ನು ಸೇರಿ, ಅಲ್ಲಿಂದ ಎಂಬತ್ತು ಮೈಲಿಗಳ ದೂರದಲ್ಲಿದ್ದ ಕಾಮಿಲಾಪುರಕ್ಕೆ ಬಂದು ಸೇರಿದನು. ಅಲ್ಲಿ ಆತನು ತಾನು ಬಾಲ್ಯದಲ್ಲಿ ವಾಸವಾಗಿದ್ದ ಮನೆಯನ್ನು ನೋಡಿದ ಕೂಡಲೆ, ಆತನಿಗುಂಟಾದ ಸಂತೋಷವು ಇಷ್ಟಿಷ್ಟೆಂದು ಹೇಳುವುದಕ್ಕಾಗದು. ರಂಗರಾಜನು ತನ್ನ ಮನೆಯನ್ನು ನೋಡುತ್ತಾ ಆನಂದದಿಂದ ಅದರ ಬಳಿಯಲ್ಲಿಯೇ ಕುಳಿತುಬಿಟ್ಟನು. ತನ್ನ ಬಾಲ್ಯದ ಮನೆಯೆಂಬ ಅಭಿಮಾನದ ಮರ್ಮವನ್ನು ಬಲ್ಲವನೇ ಬಲ್ಲನು. ರಂಗರಾಜನು ಅಲ್ಲಿ ಕುಳಿತೊಡನೆಯೇ ಆತನ ಬಾಲ್ಯಕಾಲದ ವಿನೋದಗಳೆಲ್ಲವೂ ಒಂದೊಂದಾಗಿ ಜ್ಞಾಪಕಕ್ಕೆ

ಬರಲಾರಂಭಿಸಿದುವು. ಈ ಆನಂದದಲ್ಲಿ ಆತನು ಎಷ್ಟು ಹೊತ್ತು ಕಳೆದನೋ ಅದು ಅವನಿಗೆ ಗೋಚರಿಸಲೇ ಇಲ್ಲ. ಅಂತೂ ಬಲು ಹೊತ್ತು ಕಳೆದ ಬಳಿಕ ಆತನು ಗುಟ್ಟಿನಲ್ಲಿ ಅವಿತಿಟ್ಟಿದ್ದ ಪೆಟ್ಟಿಗೆಯನ್ನು ತೆಗೆಯಲು ಹೊರಟನು. ಆಗ ಆವನ ಮನದಲ್ಲಿ ಉಂಟಾದ ಪರಿವರ್ತನೆಯು ಈ ರೀತಿಯಾಗಿದ್ದಿತು.

"ನಾನು ಎಂತಹ ದಡ್ಡನಿರಬಹುದು! ನನಗೆ ಇಂತಹ ದುರ್ಬುದ್ಧಿಯು ಹುಟ್ಟಬಹುದೇ? ನಾನು ಇಷ್ಟು ದಿನಗಳೂ ಅವಿವೇಕಿಯಂತೆ ಕೆಲಸಮಾಡಿ, ನನ್ನ ಅಮೂಲ್ಯವಾದ ಕಾಲವನ್ನು ವ್ಯರ್ಥವಾಗಿ ಕಳೆದೆನಲ್ಲಾ! ಕಳೆದು ಹೋದ ಕಾಲವು ಮತ್ತೆ ಬಂದೀತೆ? ಈಗ ನನ್ನ ತಪ್ಪು ನನಗೆ ಚೆನ್ನಾಗಿಯೂ ಗೊತ್ತಾಯಿತು. ಇಷ್ಟು ವಯಸ್ಸಿನಲ್ಲಿಯೇ ನನಗೆ ಇಷ್ಟರ ಮಟ್ಟಿನ ವಿವೇಕವು ಹುಟ್ಟಿದುದಕ್ಕಾಗಿ ನಾನು ಭಗವಂತನನ್ನು ಪರಿಪರಿಯಾಗಿ ಕೊಂಡಾಡುವೆನು. ಇಂದಿನಿಂದ ಆ ವಿಲಾಸಿನಿಯ ವಿಲಾಸವೂ ಸಾಕು, ನನ್ನ ವಿಲಾಪವೂ ಸಾಕು. ನಾನು ಆಕೆಯನ್ನು ಮರೆತು ಬಿಡುವೆನು. ಇಂದಿನಿಂದ ನಾನು ಬದುಕಿ ಬಾಳಿ ದೊಡ್ಡಮನುಷ್ಯನೆನಿಸಿಕೊಳ್ಳುವುದಕ್ಕೆ ಮಾಡಬೇಕಾದ ಕೆಲಸವೆಲ್ಲವನ್ನೂ ಮಾಡುವೆನು. ನನಗೆ ಶ್ರೇಯಸ್ಸು ಇದರಲ್ಲಿದೆಯೇ ಹೊರತು ಅದರಲ್ಲಿಲ್ಲ. ನಾನೇನೋ ದೊಡ್ಡಮನುಷ್ಯನಾಗುವುದಕ್ಕೆ ಪ್ರಯತ್ನಮಾಡುವೆನು. ಅದು ಫಲಿಸಲಿ, ಫಲಿಸದಿರಲಿ, ನನ್ನ ಪ್ರಯತ್ನವಾದರೂ ನಿಷ್ಫಲವಾಗಲಾರದು.

ಈಗ ಗುಟ್ಟಿನ ಪೆಟ್ಟಿಗೆಯನ್ನು ಹೊರಗೆ ತೆಗೆದು ಆದರಲ್ಲಿರುವುದನ್ನು ನೋಡುವೆನು. ಅದರಲ್ಲಿ ನನ್ನ ವೃದ್ಧಪಿತನ ಉಪದೇಶ ವಾಕ್ಯಾವಳಿಯಿರಬಹುದು. ನಾನು ಅವುಗಳಂತೆಯೇ ನಡೆದುಕೊಂಡು, ನಮ್ಮ ಕುಲಗೌರವವನ್ನು ಉಳಿಸುವೆನು. ನಾನು ಇಲ್ಲಿಗೆ ಬಂದುದು ಒಳ್ಳೆಯದೇ ಆಯಿತು. ರಾಜನಗರದಲ್ಲಿದ್ದುಕೊಂಡೇ ಬದುಕುವ ದಾರಿಯನ್ನು ಹುಡುಕಿಕೊಳ್ಳುವೆನು. ಬದುಕುವ ಯೋಗವಿದ್ದರೆ ಸ್ವಸ್ಥಲವೇನು, ಪರಸ್ಥಲವೇನು?"

## ಎಂಟನೆಯ ಅಧ್ಯಾಯ.

**ಪೆಟ್ಟಿಗೆಯ ಗುಟ್ಟು ರಟ್ಟಾದುದು. ಅಪೂರ್ವ ಬಂಧೂದಯ**

ರಂಗರಾಜನು ಪುಷ್ಟನಾದ ಯುವಕನಾಗಿ ಬಳೆದಿದ್ದುದರಿಂದ, ರಾಜನಗರದ ಪೂರ್ವಪರಿಚಿತರಾರೂ ಆತನನ್ನು ಗುರುತಿಸಲಾರದೇ ಹೋದರು.

ಕಾರ್ಯವು ನೆರವೇರುವ ವರೆಗೂ, ತನ್ನ ಪರಿಚಯವನ್ನುಂಟುಮಾಡಿಕೊಳ್ಳ ಕೂಡದೆಂದು ರಂಗರಾಜನು ಮೊದಲು ತಾನು ವಾಸವಾಗಿದ್ದ ಕಾಮಿಲಾ ಪುರಕ್ಕೆ ಬಂದನು. ಅಲ್ಲಿ ತಾನು ಹೂತಿಟ್ಟಿದ್ದ ಪೆಟ್ಟಿಗೆಯನ್ನು ತೆಗೆದುಕೊಂಡು ಕಾಲಹರಣಕ್ಕೆ ಎಡೆಗುಡದೆ ರಾಜನಗರಕ್ಕೆ ಹಿಂದಿರುಗಿ ಬಂದುಬಿಟ್ಟನು. ರಂಗರಾಜನು ತಾನು ಇಳಿದಿದ್ದ ಅಡುಗೂಳಜ್ಜಿಯ ಮನೆಯನ್ನು ಸೇರಿ, ರಾತ್ರಿಯ ಊಟವನ್ನು ತೀರಿಸಿದ ಬಳಿಕ ಅರ್ಧರಾತ್ರದ ಸಮಯದಲ್ಲಿ ಆ ಪೆಟ್ಟಿಗೆಯನ್ನು ತೆರೆದು ನೋಡಿದನು. ಅದರಲ್ಲಿ ನಿಕ್ಷೇಪರಕ್ಷಣ ಸಮಿತಿಯ ಮುಖ್ಯಾಧಿಕಾರಿಯ ಹೆಸರಿಗೊಂದು ಕಾಗದವೂ, ರಂಗರಾಜನ ಹೆಸರಿಗೇ ಒಂದು ಕಾಗದವೂ ಇವೆರಡೂ ಇದ್ದುವು. ರಂಗರಾಜನು ತನ್ನ ಹೆಸರಿನ ಕಾಗದವನ್ನು ತೆಗೆದುಕೊಂಡು ಅದನ್ನು ಬಿಚ್ಚಿದನು. ಅದರಲ್ಲಿ ಎರಡು ಭಾವ ಚಿತ್ರಗಳಿದ್ದುವು. ಮೊದಲನೆಯದು—ಪ್ರಧಾನ ಸೇನಾಪತಿಯ ವೇಷದಲ್ಲಿದ್ದ ಒಬ್ಬ ಸರದಾರನ ಭಾವಚಿತ್ರವು. ಇದರಡಿಯಲ್ಲಿ ರಂಗರಾಜನ ಪಿತನೆಂದು ಗುರುತಿಸಿದ್ದಿತು. ಇದನ್ನು ನೋಡಿ ರಂಗರಾಜನು ಬೆರಗಾಗಿ ಎವೆಯಿಕ್ಕದೆ ಬಲು ಹೊತ್ತು ನೋಡಿ, ಮತ್ತೊಂದೇನಿರಬಹುದೆಂದು ನೋಡಿದನು. ಅದೊಬ್ಬ ಸುಂದರಾಂಗಿಯಾದ ಸ್ತ್ರೀಯ ಭಾವಚಿತ್ರವಾಗಿದ್ದಿತು. ಅದರಡಿ ಯಲ್ಲಿಯೂ ರಂಗರಾಜನ ತಾಯಿಯೆಂದು ಬರೆದಿದ್ದಿತು. ರಂಗರಾಜನು ಅತ್ಯಂತ ಪ್ರೀತಿಯಿಂದ ಇವೆರಡು ಭಾವಚಿತ್ರಗಳನ್ನೂ ಕಣ್ಣಿಗೊತ್ತಿಕೊಂಡು ಆನಂದ ಬಾಷ್ಪಗಳನ್ನು ಸುರಿಸಿದನು. “ನನ್ನ ತಂದೆತಾಯಿಗಳನ್ನು ಎಲ್ಲಿ ನೋಡಲಿ? ಅವರು ಬದುಕಿದ್ದರೆ ಎಂದಾದರೊಂದು ದಿನ ನೋಡಬಹುದು. ಅವರು ಇಷ್ಟು ಕಾಲದ ವರೆಗೆ ಬದುಕಿರುವರೋ ಇಲ್ಲವೋ, ಬಲ್ಲವರಾರು?” ಎಂದು ಮುಂತಾಗಿ ರಂಗರಾಜನು ಚಿಂತಿಸುತ್ತಿರುವಷ್ಟರಲ್ಲಿಯೇ ಆ ಆನಂದ ಬಾಷ್ಪಗಳು ಶೋಕಬಾಷ್ಪಗಳಾಗಿ ಪರಿಣಮಿಸಿ, ಧಾರಾಕಾರವಾಗಿ ಹರಿದು ಹೋದವು. ರಂಗರಾಜನು ಈ ಶೋಕದ ವೇಗವನ್ನು ತಡೆಯಲಾರದವ ನಾಗಿ ಮಗುವಿನಂತೆ ಗಳಗಳನೆ ಅತ್ತುಬಿಟ್ಟನು. ಅತ್ತಲ್ಲದೆ ದುಃಖವು ಶಮ ನವಾಗಲಾರದು. ಅದರಂತೆಯೇ ರಂಗರಾಜನೂ ಅತ್ತು ಅತ್ತು ಬೇಸತ್ತವ ನಾಗಿ, ಕೊಂಚಕೊಂಚವಾಗಿ ಚೇತರಿಸಿಕೊಂಡು ಇಂತೆಂದನು—

“ನನ್ನ ಪಾಲಕ ತಂದೆಯು ಹೀಗೇಕೆ ಮಾಡಿದನು? ಈ ಪಟಗಳನ್ನು ನನಗೆ ಮೊದಲೇ ತೋರಿಸಿ, ನನ್ನ ತಾಯಿತಂದೆಗಳಾರೆಂಬುದನ್ನು ತಿಳಿಸಿದ್ದ

ದ್ದರೆ, ನಾನು ಇಷ್ಟು ತೊಂದರೆ ಪಡಬೇಕಾದುದೇನೂ ಇರಲಿಲ್ಲವಲ್ಲ ? ಆ ವೃದ್ಧಪಿತನು ಹೀಗೆ ಗುಟ್ಟಾಗಿರಲು ಕಾರಣವೇನು ? ಈಗ ಆತನು ಗತಿಸಿ ಹೋಗಿರುವುದರಿಂದ, ಈ ಚಿತ್ರಗಳ ಚರಿತ್ರೆಯನ್ನು ನನಗೆ ತಿಳಿಸಬಲ್ಲವರಾರು?

ಕಳೆದು ಹೋದುದನ್ನು ಕಟ್ಟಿಕೊಂಡು ವ್ಯಸನಪಟ್ಟು ಪ್ರಯೋಜನವಿಲ್ಲ. ನಾನು ಹೇಗಾದರೂ ಮಾಡಿ ನನ್ನ ತಾಯಿತಂದೆಗಳಾರೆಂಬುದನ್ನು ಕಂಡು ಹಿಡಿಯುವೆನು. ಚಿತ್ರವನ್ನು ನೋಡಿದರೆ, ನನ್ನ ತಾಯಿತಂದೆಗಳು ಸತ್ಕುಲ ಪ್ರಸೂತರೆಂದು ಗೊತ್ತಾಗುವುದು. ಇವರ ಹೆಸರಾಗಲಿ, ಊರಾಗಲಿ ಒಂದೂ ಗೊತ್ತಾಗುವುದಿಲ್ಲ. ಮುಖಭಾವವನ್ನು ನೋಡಿದರೆ, ತಂದೆಯು ವಿದ್ಯಾ ನಗರದವನೆಂದೂ, ತಾಯಿಯು ರಾಜನಗರದವಳೆಂದೂ ತೋರಿಬರುತ್ತಿರುವುದು."

ಈ ಬಗೆಯಾದ ಚಿಂತೆಯಿಂದ ರಂಗರಾಜನಿಗೆ ಒಂದು ದಿನವು ಕಳೆಯಿತು. ಮರುದಿನ ಮುಂದಣಕರ್ತವ್ಯ ಶೇಷವನ್ನು ಆಲೋಚಿಸಿದ ಬಳಿಕ, ನೂತನ ವಾದ ವೃತ್ತಪತ್ರಿಕೆಯೊಂದನ್ನು ಕೊಂಡುಕೊಂಡು ಅದನ್ನು ಆಮೂಲಾಗ್ರವಾಗಿ ಓದುವುದಕ್ಕೆ ಕುಳಿತನು. ಅದರಲ್ಲಿ ವಿದೇಶೀಯ ವಿಷಯ ಸಂಗ್ರಹ ವೆಂಬ ಭಾಗವನ್ನು ಆತನು ಓದುತ್ತಿರುವಾಗ, ಅವನ ದೃಷ್ಟಿಯು " ರೂಪ ಸಂಪದ್ವಿವಾಹ " ಎಂಬ ಶಿರೋನಾಮದ ಕಡೆಗೆ ಬಿದ್ದಿತು. ಅದರ ವಿಷಯ ಸಂಗ್ರಹವೇನೆಂದರೆ—

" ಅಮರಾವತಿಯ ಕೋಟೀಶ್ವರನೊಬ್ಬನು ರಾಜನಗರದ ಲಕ್ಷಾಧಿಪತಿಯ ಕುವರಿಯಾದ ವಿಲಾಸಿನೀದೇವಿಯೆಂಬುವಳನ್ನು ಬಹುಕಾಲದಿಂದಲೂ ಪ್ರೀತಿಸುತ್ತಿದ್ದನು. ಕೆಲವು ಕಾಲಾನಂತರದಲ್ಲಿ ವಿಲಾಸಿನಿಯ ತಂದೆಯು ವ್ಯಾಪಾರದ ದುರ್ಯೋಗದಿಂದ ತನ್ನ ಸಂಪತ್ತೆಲ್ಲವನ್ನೂ ಕಳೆದುಕೊಂಡು ದರಿದ್ರನಾಗಿಬಿಟ್ಟನು. ಕೇವಲ ರೂಪದಲ್ಲಿಯೇ ಮುಗ್ಧನಾಗಿದ್ದ ಕೋಟೀಶ್ವರನು ವಿಲಾಸಿನಿಯ ತಂದೆಗೆ ಒದಗಿ ಬಂದ ದುರ್ದಾರಿದ್ರ್ಯವನ್ನು ಲೆಕ್ಕಿಸದೆ, ವಿಲಾಸಿನಿಯನ್ನು ಮೊದಲಿಗಿಂತಲೂ ಅಧಿಕವಾಗಿ ಪ್ರೀತಿಸತೊಡಗಿದನು. ಇವರಿಬ್ಬರ ಪ್ರೀತಿಯು ಐಶ್ವರ್ಯಾಧೀನವಲ್ಲವೆಂದು ಸ್ಥಿರಪಟ್ಟಮೇಲೆ, ವಿವಾಹವು ಕ್ರಮರೀತಿಯಿಂದ ನಡೆಯತಕ್ಕುದೆಂದು ಇತ್ಯರ್ಥವಾಗಿರುವುದು. ಒಂದೆರಡು ವಾರಗಳೊಳಗಾಗಿಯೇ ವಿವಾಹ ಮಹೋತ್ಸವವು ಅತಿವೈಭವದಿಂದ ನಡೆಯಬಹುದೆಂದು ಊಹಿಸಲಾಗಿದೆ. ಪರಸ್ಪರ ಪ್ರೀತಿಯಿಂದಲೇ ವಿವಾಹ

ವನ್ನು ಏರ್ಪಡಿಸಿಕೊಂಡ ಭವಿಷ್ಯದ್ವಧೂವರರು ನಿರ್ದುಷ್ಟವಾದ ಅನುರಾಗದ ವೈಭವದಿಂದ ಅನಂತಕಾಲದ ವರೆಗೂ ಸಂಸಾರಸುಖವನ್ನು ಅನುಭವಿಸಲೆಂದು ನಾವು ಭಗವಂತನನ್ನು ಈಗಳಿಂದಲೂ ಪ್ರಾರ್ಥಿಸುವವರಾಗಿರುವೆವು. "

ರಂಗರಾಜನು ಇದನ್ನು ಓದಿದ ಕೂಡಲೆ ತಲೆತಿರುಗಿದವನಾಗಿ ಪತ್ರಿಕೆಯನ್ನು ದೂರವಾಗಿ ಬಿಸುಟು ಸುಮ್ಮನೆ ಕುಳಿತುಬಿಟ್ಟನು. ಅವನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಮಾಡುವುದೇನು? ಪ್ರಾಣಿಮಾತ್ರವು ಒಳ್ಳೆಯದನ್ನಾಗಲಿ, ಕೆಟ್ಟದನ್ನೇ ಆಗಲಿ ತಪ್ಪದೆ ಅನುಭವಿಸಿಯೇ ತೀರಬೇಕು. ಇದಕ್ಕೆ ರಂಗರಾಜನು ಹೊರತಲ್ಲ. ರಂಗರಾಜನು ಈ ಯಮಯಾತನೆಯನ್ನು ಅನುಭವಿಸಿದ ಬಳಿಕ, " ಇಂದು ನನಗೆ ಉಳಿದಿದ್ದ ಅಲ್ಪಸ್ವಲ್ಪ ಆಸೆಯೂ ನಿರಾಶೆಯಾಯಿತು. ಈಗೀಗ ನನಗೆ ಸ್ವರ್ಗದಲ್ಲಿ ನರಕಯಾತನೆ ಎಂಬುದು ಅನುಭವಕ್ಕೆ ಬಂದಿತು," ಎಂದುಕೊಂಡು ಮತ್ತೆ ಆಲೋಚಿಸತೊಡಗಿದನು.

" ಎಲ್ಲವೂ ನಾನು ಊಹಿಸಿದಂತೆಯೇ ನಡೆದುದು. ಈ ಸೌಂದರ್ಯವೂ, ಈ ಮಾಧುರ್ಯವೂ, ಈ ಲಾವಣ್ಯವೂ, ಈ ಯೌವನವೂ ನನಗಾಗಿ ಸೃಷ್ಟವಾಗಿಲ್ಲವೆಂದು ನನಗೆ ಮೊದಲೇ ಹೊಳೆಯಿತು. ಅದೃಷ್ಟವಂತನಾದ ಐಶ್ವರ್ಯವಂತನೊಬ್ಬನೇ ಇದರ ಫಲವನ್ನು ಅನುಭವಿಸುವುದಕ್ಕೆ ಹುಟ್ಟಿರುವನು. ನನ್ನಂತಹ ಬಡಪಾಪಿಗೆ ಇಂತಹ ಸುಖಸಾಂರಾಜ್ಯವು ಎಲ್ಲಿಂದ ಬರಬೇಕು? ಇನ್ನು ನಾನು ಈಕೆಯನ್ನು ಮರೆಯಲೇ ಬೇಕು. ಇನ್ನು ನಾನು ಈ ಸುಖಶೂನ್ಯವಾದ ಪ್ರಪಂಚದಲ್ಲಿ ಹೊಟ್ಟೆಗಾಗಿ ಕ್ಲೇಶ ಪಡಲೇಬೇಕು. ಇಂದಿನ ವರೆಗೆ ಅನೇಕರು ನನ್ನನ್ನು ಬುದ್ಧಿಮಂತನೆಂದು ಅರಿತಿದ್ದರು. ನನ್ನಂತಹ ಮೂಢನು ಮತ್ತಾರೂ ಇಲ್ಲವೆಂದು ಈಗ ನನಗೆ ಚೆನ್ನಾಗಿಯೂ ಗೊತ್ತಾಯಿತು. ಇನ್ನಾದರೂ ನಾನು ಮೌಢ್ಯವನ್ನು ದೂರಮಾಡಿ ಮನುಷ್ಯನಂತೆ ಬಾಳುವೆನು. "

ಈ ರೀತಿಯಾಗಿ ಪರ್ಯಾಲೋಚಿಸಿದ ರಂಗರಾಜನಿಗೆ ಮುಂದೇನಾಗುವುದೆಂಬುದು ಹೇಗೆ ಗೊತ್ತಾಗಬೇಕು? ಈ ಕಾರ್ಯಕಾರಣ ಪ್ರಪಂಚದಲ್ಲಿ ಕಾರಣದಿಂದ ಇಂತಹ ಫಲವುಂಟಾಗುವುದೆಂದೂ, ಈ ಕಾರ್ಯಕ್ಕೆ ಇದೇ ಕಾರಣವೆಂದೂ ಊಹಿಸುವ ಶಕ್ತಿಯನ್ನೇ ಕಳೆದುಕೊಂಡು ಅಂಧಕಾರದಲ್ಲಿ

ಗತಿಗಾಣದೆ ತೊಳಲುವ ಲೋಕಾನುಭವವನ್ನರಿಯದ ಮನುಷ್ಯನ ಬಾಳೆಲ್ಲವೂ ಹೀಗೆಯೇ ಸರಿ.

ಈ ದುಃಖಮಯ ಪ್ರಪಂಚದಲ್ಲಿ ರಂಗರಾಜನಿಗೆ ಏನೂ ಬೇಕಾಗಿಲ್ಲ ಆದಕ್ಕಾಗಿಯೇ ಅವನು ನಿಕ್ಷೇಪರಕ್ಷಣ ಸಮಿತಿಗೆ ಹೋಗುವುದನ್ನೇ ಮರೆತುಬಿಟ್ಟಿದ್ದನು. ಇದರ ಮೇಲೆ ಅವನಿಗೆ ಇಷ್ಟವೂ ಇರಲಿಲ್ಲ. ಕಾರಣವೇನೆಂದರೆ—ಅಲ್ಲಿಗೆ ಹೋಗಿ ಅಶ್ಲೀಲವಾದ ಸುದ್ದಿಯನ್ನು ಕೇಳಿ ತಿಳಿದುಕೊಂಡು ಕೊರಗಬೇಕಾದೀತು ಎಂದು ಅವನ ಮನದಲ್ಲಿ ಬಲವತ್ತರವಾದ ಭಾವನೆಯುಂಟಾದುದೇ ಇದಕ್ಕೆ ಕಾರಣವು.

ರಂಗರಾಜನಿಗೆ ಇಷ್ಟೆನ್ನುವುದರೊಳಗಾಗಿ ಇಪ್ಪತ್ತೊಂದು ವರ್ಷವು ಕಳೆದು, ಅದರ ಮೇಲೆ ಕೆಲವು ತಿಂಗಳುಗಳೂ ಕಳೆಯುತ್ತಾ ಬಂದುವು. ಅವನ ಹೃದಯದ ಒಂದೆಡೆಯಲ್ಲಿ ಅಲ್ಲಿಗೆ ಹೋಗಿ ವಿಷಯವೇನೆಂಬುದನ್ನಾದರೂ ತಿಳಿಯಬೇಕೆಂದು ಕುತೂಹಲ ಮುಟ್ಟಿಗೆ ಅವನನ್ನು ಅತಿಯಾಗಿ ಪೀಡಿಸುತ್ತಿದ್ದಿತು. ಹೀಗಿರಲೊಂದು ದಿನ ರಂಗರಾಜನು ತಟ್ಟನೆದ್ದು ಅದಕ್ಕೆ ಸಂಬಂಧಪಟ್ಟ ಕಾಗದವನ್ನು ತನ್ನ ಕಿಸೆಯಲ್ಲಿಟ್ಟುಕೊಂಡು ನಿಕ್ಷೇಪರಕ್ಷಣ ಸಮಿತಿಯ ಕಡೆಗೆ ತೆರಳಿದನು. ಅಲ್ಲಿ ಕುಳಿತಿದ್ದ ಲೇಖಕನೊಬ್ಬನನ್ನು ಕಂಡು—ಮಹಾಶಯ ! ಇಲ್ಲಿನ ಮುಖ್ಯಾಧಿಕಾರಿಯನ್ನು ಈಗ ನೋಡಲು ಸಾಧ್ಯವೇ ? ಎಂದು ಪ್ರಶ್ನೆಮಾಡಿದನು.

ಲೇಖಕ—ಅವರು ಕೆಲಸದಲ್ಲಿ ಮುಳುಗಿ ಹೋಗಿರುವರು. ನನ್ನಿಂದೇನಾಗಬೇಕು ? ತಿಳಿಸೋಣವಾಗಲಿ.

ರಂಗರಾಜ—ಮಹಾಶಯ ! ತಮ್ಮಿಂದಾಗಬೇಕಾದುದೇನೂ ಇಲ್ಲ. ನಾನು ಅಧಿಕಾರಿಗಳನ್ನು ನೋಡಬೇಕೆಂದಿದ್ದೆನು.

ಲೇಖಕ—ಅವರ ಕಾರ್ಯಗೌರವದಲ್ಲಿ ಅವರನ್ನು ನೋಡುವುದು ಅಸಾಧ್ಯವೆಂದು ತೋರುವುದು. ತಮ್ಮ ನಾಮಧಾಮಗಳನ್ನು ತಿಳಿಸುವುದಾದರೆ, ನಾನು ಹೋಗಿ ಅವರಿಗೆ ಅರಿಕೆಮಾಡಿ ನೋಡುವೆನು.

ರಂಗರಾಜ—ತಾವು ನನಗಾಗಿ ಅಷ್ಟು ತೊಂದರೆಯನ್ನು ತೆಗೆದುಕೊಳ್ಳಬೇಕಾದುದಿಲ್ಲ. ಅವರನ್ನು ಇಂದಿಲ್ಲದಿದ್ದರೆ ನಾಳೆ ನೋಡಿದರಾಯಿತು. ನನ್ನ ರಾಜಕಾರ್ಯವು ಅಷ್ಟರಲ್ಲಿಯೇ ಇರುವುದು.

ಲೇಖಕ—ಮಹಾಶಯ ! ಸಮಿತಿಯ ಕಾರ್ಯಕಲಾಪವು ಅಪರಿಮಿ

ತವಾಗಿರುವುದರಿಂದ, ಇಂದೇನು, ನಾಳೆಯೇನು ? ನಿತ್ಯವೂ ಒಂದೇ ತೆರನಾಗಿರುವುದು. ಅದರಲ್ಲಿಯೂ ನಮ್ಮ ರಮಾರಮಣರಾಯರಿಗಂತೂ ವ್ಯವಧಾನವೇ ಇರುವುದಿಲ್ಲ. ನಿಮ್ಮ ಕೆಲಸವು ಗುರುತರವಾಗಿರುವುದಾದರೆ, ನಿಮ್ಮ ನಾಮಧಾಮುಗಳನ್ನು ಕೊಡೋಣವಾಗಲಿ. ನಾನೇ ಹೋಗಿ ತಿಳಿಸಿ ಬರುವೆನು.

ಬಂದ ಮೇಲೆ ಹಾಗೆಯೇ ಹೋಗುವುದು ತರವಲ್ಲವೆಂದು ರಂಗರಾಜನು ತನ್ನ ನಾಮಧಾಮುಗಳನ್ನು ಕೊಟ್ಟನು. ಲೇಖಕನು ಈ ವಿಷಯವನ್ನು ಯಜಮಾನನಿಗೆ ತಿಳಿಸಿದೊಡನೆಯೇ, ಆತನು ದಡಬಡನೆ ಬಾಗಿಲ ಬಳಿಗೈತಂದು---ಮಹಾಶಯ ! ರಂಗರಾಜರು ತಾವೆಯೇ ? ಎಂದನು.

ರಂಗರಾಜ—ಅಹುದು, ಮಹಾಸ್ವಾಮಿ ! ನನ್ನನ್ನು ಹಾಗೆಯೇ ಕರೆವರು.

ರಮಾರಮಣ—ತಾವು ನನ್ನ ಜತೆಯಲ್ಲಿಯೇ ಬರೋಣವಾಗಲಿ. ತಮ್ಮನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ನಾನು ಕೆಲವು ಕಾಲಗಳಿಂದಲೂ ತಮ್ಮನ್ನೇ ಇದಿರುನೋಡುತ್ತಿದ್ದೆನು. ಈಗಲಾದರೂ ತಾವು ಬರೋಣವಾಯಿತಲ್ಲ !

ರಂಗ—ಸ್ವಾಮಿ ! ತಮಗೆ ಕಾರ್ಯಗೌರವವಿರುವುದಾದರೆ, ಮತ್ತೊಂದು ದಿವಸ ಬಂದು ತಮ್ಮ ದರ್ಶನವನ್ನು ತೆಗೆದುಕೊಳ್ಳುವೆನು.

ರಮಾ—ಕಾರ್ಯಗೌರವವೇ ! ನಿಮ್ಮೊಡನೆ ಮಾತನಾಡುವುದು ಕೂಡ ಕಾರ್ಯಗೌರವವೇ ಆಗಿರುವುದು. ತಾವು ಸಂಕೋಚಪಡಬೇಕಾದುದಿಲ್ಲ. ನನ್ನೊಡನೆ ಬರೋಣವಾಗಲಿ. ಇಷ್ಟು ದಿವಸಗಳು ತಾವು ಎಲ್ಲಿರೋಣವಾಗಿದ್ದಿತು ?

ರಂಗ—ಸ್ವಾಮಿ ! ಇಷ್ಟು ದಿವಸಗಳೂ ನಾನು ಅಮರಾವತಿಯಲ್ಲಿದ್ದೆನು.

ರಮಾ—ಅಮರಾವತಿಯಲ್ಲಿಯೇ ?

ರಂಗ—ಅಹುದು, ಮಹಾಸ್ವಾಮಿ! ಅಮರಾವತಿಯಲ್ಲಿಯೇ ಇದ್ದೆನು.

ರಮಾರಮಣನು ಕೊಂಚ ಹೊತ್ತು ರಂಗರಾಜನನ್ನು ಎವೆಯಿಕ್ಕದೆ ನೋಡಿದ ಬಳಿಕ, ಅವನ ಕೈಗಳನ್ನು ಹಿಡಿದುಕೊಂಡು ಇಂತೆಂದನು:—

"ಮಗು ! ನಿನ್ನನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ಇಷ್ಟು ದಿನಗಳ ಮೇಲಾದರೂ ನೀನು ಮುಖವನ್ನು ತೋರಿದೆಯಲ್ಲಾ!

ಕಾಲವಿಲಂಬವಾದುದರಿಂದ ನಾನು ನಿನ್ನ ವಿಷಯದಲ್ಲಿ ಅಯೋಗ್ಯ ಚಿಂತನೆಯನ್ನು ಮಾಡಿದ್ದೆನು. ನಿನ್ನ ವಿಷಯವು ನನಗೆ ಮೊದಲೇ ಗೊತ್ತಿದ್ದಿದ್ದರೆ, ನಿನ್ನ ದೊಡ್ಡಪ್ಪನು ಹೀಗೆ ಗುಟ್ಟು ಮಾಡುವುದಕ್ಕೆ ಅಸ್ಪದವೇ ಇರುತ್ತಿರಲಿಲ್ಲ. ಈಗ ಮಾಡುವುದೇನು ? ಕಳೆದುದು ಕಳೆದೇ ಹೋಯಿತು. ಈಗಲಾದರೂ ನೀನು ಬಂದೆಯಲ್ಲಾ, ಮಗು ! ಅಯ್ಯೋ ಪಾಪ ! ಇಷ್ಟು ದಿನಗಳವರೆಗೂ ನೀನು ಏನೇನು ಕಷ್ಟಗಳನ್ನು ಅನುಭವಿಸಿದೆಯೋ ದೇವನೊಬ್ಬನೇ ಬಲ್ಲನು. ನಿನ್ನಂತಹವರು ಇಂತಹ ಕಷ್ಟಗಳಿಗೆ ಗುರಿಯಾಗಬಾರದು. ಇದೆಲ್ಲವೂ ನಿನ್ನ ಗ್ರಹಚಾರದ ದೋಷವು. ಈಗ ನಿನ್ನ ಕಷ್ಟಗಳೆಲ್ಲವೂ ಪರಿಹಾರವಾದುವು."

ರಂಗರಾಜನು ಈ ಮಾತುಗಳನ್ನು ಕೇಳಿದನು. ಆದರೆ ಅವನಿಗೆ ಒಂದೂ ಅರ್ಥವಾಗಲಿಲ್ಲ. ಆಗ ಅವನ ಮನದಲ್ಲಿ ಉಂಟಾದ ಭಾವವನ್ನು ಮಟ್ಟಿಗೆ ವರ್ಣಿಸಲು ನಮ್ಮ ಅಲ್ಪಚೇತನವುಳ್ಳ ಲೇಖನಿಗೆ ಅಳವಲ್ಲವು. ಆದರೂ ಆತನು ಆಲೋಚಿಸಿದ ಪರಿಯನ್ನು ಕೊಂಚಮಟ್ಟಿಗೆ ಇಲ್ಲಿ ಸೂಚಿಸುವೆವು:--

" ನನ್ನ ವಿಷಯದಲ್ಲಿ ಈತನು ಇಷ್ಟು ಮರುಗುವುದಕ್ಕೆ ಕಾರಣವೇನು ? ಈತನಾಡಿದ ಮಾತುಗಳಿಂದ, ಈತನು ನನ್ನ ಪೂರ್ವೋತ್ತರವೆಲ್ಲವನ್ನೂ ಚೆನ್ನಾಗಿಯೂ ಅರಿತಿರುವನೆಂದು ಗೊತ್ತಾಗುವುದು. ಈತನು ನನ್ನನ್ನು ಮಗುವೆಂದು ಸಂಬೋಧಿಸುತ್ತಿರುವುದನ್ನು ನೋಡಿದರೆ, ಈತನು ನನಗೆ ಸಮೀಪದ ದೇಹಾನುಬಂಧಿಯಾಗಿರಬೇಕೆಂದೂ ತೋರುವುದು. ಈತನನ್ನು ನೋಡಿದುದರಿಂದ ನನ್ನ ಗ್ರಹಚಾರದೋಷವೆಲ್ಲವೂ ಪರಿಹಾರವಾಯಿತೆಂದ ಮೇಲೆ, ನಾನಾರೋ ಧನಿಕನ ಸದ್ವಂಶದಲ್ಲಿ ಜನಿಸಿರಬೇಕೆಂದು ಊಹಿಸಬೇಕಾಗಿದೆ. ಇದು ಆಧಾರವಿಲ್ಲದ ಕೇವಲವಾದ ಊಹೆಯು. ನಾನು ಇಂತಹ ಊಹೆಗಳಿಗೆ ಬೆರಗಾಗತಕ್ಕವನಲ್ಲ. ಕೊಂಚ ಹೊತ್ತಿನೊಳಗಾಗಿಯೇ ಎಲ್ಲವೂ ತಾನಾಗಿಯೇ ಗೊತ್ತಾಗುವಲ್ಲಿ, ನಾನೇಕೆ ಇಷ್ಟು ತ್ವರೆಪಡಬೇಕು ? "

ಇಷ್ಟೆನ್ನುವುದರೊಳಗಾಗಿ ರಮಾರಮಣನು ರಂಗರಾಜನನ್ನು ತನ್ನ ಕೋಣೆಗೆ ಕರೆದುಕೊಂಡು ಹೋಗಿ, ಒಂದು ಸಮುಚಿತವಾದ ಆಸನದ ಮೇಲೆ ಕುಳ್ಳಿರಿಸಿ—ಮಗು ! ಇಂದಿನ ವರೆಗಣ ನಿನ್ನ ಚರಿತ್ರೆಯನ್ನು ಸಂಕ್ಷೇಪವಾಗಿ ತಿಳಿಸು. ಇಷ್ಟು ದಿನಗಳು ಕಳವಳದಿಂದ ಭಾರವಾಗಿದ್ದ ನನ್ನ ಮನವು ಇಂದಾದರೂ ಹಗುರವಾಗಲಿ, ಎಂದು ಮಿದುನುಡಿಗಳನ್ನಾಡಿದನು.

ರಂಗ—ಸ್ವಾಮಿ! ತಮ್ಮ ಮಾತುಗಳು ನನಗೆ ಮೇಲಿಂದ ಮೇಲೆ ಆಶ್ಚರ್ಯವನ್ನುಂಟುಮಾಡುತ್ತಿರುವುವು. ತಾವು ನನ್ನನ್ನು ಇಷ್ಟು ಪ್ರಶ್ನೆ ಮಾಡಲು ಕಾರಣವೇನು? ತಾವಾರು? ಕೃಪೆಯಿಟ್ಟು ತಿಳಿಸೋಣವಾಗಲಿ.

ರಮಾ—ನನಗೂ ಬಾಧ್ಯತೆಯಿರುವುದರಿಂದ ಕೇಳಿದೆನೇ ಹೊರತು ಬೇರೆಯಲ್ಲ.

ರಂಗ—ಆ ಬಾಧ್ಯತೆಯೆಂಥದೆಂಬುದನ್ನು ತಿಳಿಸಬೇಕೆಂದೇ ನಾನು ಕೇಳಿದುದು.

ರಮಾ—ನಿನಗೂ ದೇವರಾಜನಿಗೂ ಒಂದು ವಿಧವಾದ ಬಾಧ್ಯತೆ ಯುಂಟೆನ್ನುವುದಾದರೆ, ನನಗೆ ಮತ್ತೊಂದು ವಿಧವಾದ ಬಾಧ್ಯತೆಯೂ ಉಂಟು. ಇದಾಗಬಾರದೇತಕೆ?

ರಂಗ—ಸ್ವಾಮಿ! ದೇವರಾಜನನ್ನು ನಾನು ತಂದೆಯೆಂದೇ ತಿಳಿದಿದ್ದೆನು. ತಮ್ಮ ಮಾತಿನಿಂದ ಆತನು ನನ್ನ ದೊಡ್ಡಪ್ಪನೆಂದು ತಿಳಿದುಕೊಂಡೆನು. ಆತನು ನನಗೆ ನಿಜವಾಗಿಯೂ ಏನಾಗಬೇಕು?

ರಮಾ—ಆತನು ನಿನ್ನ ತಂದೆಗೆ ಅಣ್ಣನಾದುದರಿಂದ ನಿನಗೆ ದೊಡ್ಡಪ್ಪನಾಗಬೇಕು.

ರಂಗ—ಆತನು ನನ್ನ ತಂದೆಗೆ ಸ್ವಂತ ಅಣ್ಣನೇ?

ರಮಾ—ಅಹುದು.

ರಂಗ—ತಾವು?

ರಮಾ—ನಾನು ನಿನ್ನ ತಾಯಿಯ ಸಹೋದರ. ಈ ಸಂಬಂಧದಿಂದ ನಾನು ನಿನಗೆ ಸೋದರಮಾವನಾಗಬೇಕು. ಅದುಕಾರಣವೇ ನನಗೂ ನಿನ್ನ ಪೂರ್ವವೃತ್ತಾಂತವನ್ನು ಕೇಳಲು ಹೆಚ್ಚಿನ ಬಾಧ್ಯತೆಯುಂಟು.

ರಂಗ—(ಎದ್ದು ನಿಂತು ನಮಸ್ಕರಿಸಿ) ಮಾವ! ನನ್ನ ಬಾಲ್ಯದ ಅವಿನಯವನ್ನು ಕ್ಷಮಿಸಬೇಕು.

ರಮಾ—ಇದರಲ್ಲಿ ನಿನ್ನ ಅಪರಾಧವೇನೂ ಇರುವುದಿಲ್ಲ. ಈ ಮಾತುಗಳೆಲ್ಲಾ ಹಾಗಿರಲಿ. ನಿನ್ನ ದೊಡ್ಡಪ್ಪನು ನಿನ್ನ ಸರ್ವಸ್ವವನ್ನೂ ನನ್ನಲ್ಲಿ ಒಪ್ಪಿಸಿರುವನು.

ರಂಗರಾಜನು 'ಸರ್ವಸ್ವವನ್ನೂ ಒಪ್ಪಿಸಿರುವನು' ಎಂಬ ಮಾತನ್ನು ಕೇಳಿದ ಕೂಡಲೆ ಚಕಿತನಾಗಿ—ಮಾವ! ತಾವು ಸರ್ವಸ್ವವೆಂಬ ಶಬ್ದವನ್ನು ಉಚ್ಚರಿಸೋಣವಾಯಿತಲ್ಲವೇ? ಎಂದು ಕೇಳಿದನು.

ರಮಾ—ಅಹುದು.

ರಂಗ—ನನಗೆ ಸರ್ವಸ್ವವೆಂಬುದೂ ಉಂಟೇ ?

ರಮಾ—ಅಪರಿಮಿತವಾಗಿಯೂ ಉಂಟು. ಇಂದು ಮೊದಲ್ಗೊಂಡು ಆ ಅಪರಿಮಿತವಾದ ಸರ್ವಸ್ವಕ್ಕೂ ನೀನೇ ಅಧಿಕಾರಿಯು. ನೀನು ಅದನ್ನು ಯುಕ್ತವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬಹುದು. ನಿನ್ನ ತಂದೆತಾಯಿಗಳು ಕೀರ್ತಿಶೇಷರಾಗಿರುವುದರಿಂದ, ಆ ಸರ್ವಸ್ವದ ಆಯವ್ಯಯದ ಮೇಲೆ ನಿನಗೆ ಸಂಪೂರ್ಣವಾಗಿ ನಿರ್ವಿವಾದವಾದ ಉತ್ತರಾಧಿಕಾರವಿರುವುದು.

ರಂಗ—(ನಡುಗುತ್ತಾ) ಮಾವ ! ನನ್ನ ತಾಯಿತಂದೆಗಳ ವಿಷಯವು ನನಗೆ ಕೊಂಚವಾದರೂ ಗೊತ್ತಿಲ್ಲ. ಅವರ ಭಾವಚಿತ್ರಗಳು ಮಟ್ಟಿಗೆ ನನ್ನಲ್ಲಿ ಇರುವುವು. ಕೃಪೆಯಿಟ್ಟು ಅವರ ವೃತ್ತಾಂತವೆಂಥದೆಂಬುದನ್ನು ತಿಳಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಬೇಡುವೆನು.

ರಮಾ—ಮಗು ! ನಿನಗೆ ಗೊತ್ತಿಲ್ಲವೇ ?

ರಂಗ—ಗೊತ್ತಿಲ್ಲ, ಮಾವ ! ಗೊತ್ತಿದ್ದಿದ್ದರೆ, ನಾನು ಮತ್ತೆ ಕೇಳುತಿದ್ದೆನೇ ?

ರಮಾ—ಹಾಗಾದರೆ ನಾನೂ ಈಗ ಅದನ್ನು ತಿಳಿಸಲಾರೆನು. ನೀನು ವಿದ್ಯಾನಗರಕ್ಕೆ ಹೋಗಿ ನಿನ್ನ ಅಧಿಕಾರ ಸಂಪತ್ತನ್ನೂ, ಚರಾಚರ ಸಂಪತ್ತನ್ನೂ ಸ್ವಾಧೀನಪಡಿಸಿಕೊಳ್ಳುವ ಕಾಲದಲ್ಲಿ ಎಲ್ಲವೂ ನಿನಗೇ ಗೊತ್ತಾದೀತು.

ರಂಗ—ನನಗೆ ಅಧಿಕಾರ ಸಂಪತ್ತೆಂದರೇನು ? ಚರಾಚರ ಸಂಪತ್ತಾವುದು ?

ರಮಾ —ಅಧಿಕಾರ ಸಂಪತ್ತೆಂದರೆ— ರಾಜ್ಯಾಧಿಕಾರ ಸಂಪತ್ತು. ಚರಾಚರ ಸಂಪತ್ತೆಂದರೆ—ಧನಕನಕ ವಸ್ತುವಾಹನಾದಿಗಳು ಚರಸಂಪತ್ತು, ಗ್ರಾಮ ಭೂಮಿ ಮುಂತಾದುವು ಸ್ಥಿರಸಂಪತ್ತು. ಈಗಲಾದರೂ ಅರ್ಥವಾಯಿತೇ ?

ರಂಗ—ಮಾವ ! ನಿರ್ಗತಿಕನಾಗಿರುವ ನನಗೆ ನಿಮ್ಮ ಮಾತುಗಳೊಂದೂ ಅರ್ಥವಾಗಲಿಲ್ಲ. ತಾವು ನನ್ನೊಡನೆ ಸರಸವಾಡುತ್ತಿಲ್ಲವಷ್ಟೇ ?

ರಮಾ—ರಂಗರಾಜ ! ನಿನ್ನೊಡನೆ ನನಗೆ ಸರಸವೆಂದರೇನು? ನಾನು ಹೇಳುವುದೆಲ್ಲವೂ ಸತ್ಯವು.

ರಂಗ—ದಯೆಯಿಟ್ಟು ಸ್ಪಷ್ಟವಾಗಿ ತಿಳಿಸೋಣವಾಗಲಿ. ನನಗಿನ್ನೂ ಪ್ರಪಂಚಾನುಭವವು ಸಾಲದೆಂದು ತಮಗೆ ವೇದ್ಯವೇ ಇರುವುದು.

ರಮಾ—ಮಗು ! ಇದಕ್ಕಿಂತಲೂ ಹೆಚ್ಚಾಗಿ ತಿಳಿಸಲು ನನಗೆ ಅಪ್ಪಣೆಯಿಲ್ಲ.

ರಂಗ—ಮಾಮು ! ಆದಾರ ಅಪ್ಪಣೆ ?

ರಮಾ—ವಿದ್ಯಾನಗರದ ಸರಕಾರದ ಅಪ್ಪಣೆ.

ರಂಗ—ಸರಕಾರದ ಅಪ್ಪಣೆಗೂ ನನಗೂ ಸಂಬಂಧವೆಂಥದು ?

ರಮಾ—ಅದೂ ನನಗೆ ಗೊತ್ತಿಲ್ಲ.

ರಂಗ—ಹಾಗಾದರೆ ನನಗೆ ನಿರ್ಬಂಧದ ಅಧಿಕಾರವಾಗಲಿ, ಸಂಪತ್ತಾಗಲಿ ರುಚಿಸದು. ನಾನು ಹೀಗೆಯೇ ಇದ್ದುಕೊಂಡು ಕಾಲವನ್ನು ಕಳೆಯುವೆನು.

ರಮಾ—ರಂಗರಾಜ ! ಇದಾರಾಡುವ ಮಾತು ? ನಿನ್ನ ಹೊಟ್ಟೆಯನ್ನು ಹೊರೆದುಕೊಳ್ಳುವುದು ಅದೊಂದು ದೊಡ್ಡ ವಿಷಯವಲ್ಲ. ನೀನು ಬದುಕಿರಲಾಗಿ ನಿನ್ನನ್ನು ಆಶ್ರಯಿಸಿಕೊಂಡು ಅನೇಕರು ಬದುಕಿದರೆ ನಿನಗೆ ಶ್ರೇಯಸ್ಸಲ್ಲವೇ ? ನೀನು ಹೀಗೆ ಬೇಸರಪಡಲಾಗದು.

ರಂಗ—ಅಧಿಕಾರ ಸಂಪತ್ತುಗಳು ಹೆಚ್ಚಿದಷ್ಟೂ ಕ್ಲೇಶವು ಮಾನವನನ್ನು ಕುಟ್ಟೆಯ ಹುಳದಂತೆ ಕೊರೆದುಬಿಡುವುದು. “ ಬೀದಿಯ ಮಾರಮ್ಮ ಮನೆಗೆ ಬಾರಮ್ಮ” ಎನ್ನುವಂತೆ ಸಲ್ಲದ ಕ್ಲೇಶವನ್ನು ಹೆಗಲೇರಿಸಿಕೊಂಡು ಕೊರಗುವುದಕ್ಕೆ ನನ್ನ ಮನವು ಒಡಂಬಡದು. ಈಗಾಗಲೇ ನಾನು ಪರಿಪರಿಯ ಕ್ಲೇಶಕ್ಕೆ ಸಿಕ್ಕಿ ಬೇಸತ್ತು ಸತ್ತುಹೋಗಿರುವೆನು. ಸುಮ್ಮನೆ ಬಿಟ್ಟರೆ ತಾವು ನನಗೆ ಮಹೋಪಕಾರ ಮಾಡಿದಂತಾಗುವುದು.

ರಮಾ—ರಂಗರಾಜ! ನೀನು ಬೇಡವೆಂದರೂ ಅದು ಬಿಡುವ ಹಾಗಿಲ್ಲ. ಲಕ್ಷ್ಮಿಯು ಮನೆಗೆ ಬಂದಾಗ ಅದನ್ನು ತಿರಸ್ಕರಿಸಬಾರದು. ಅದು ಬಂದಾಗ ನಾವು ತಿರಸ್ಕರಿಸಿದರೆ, ನಾವು ಬಯಸಿದಾಗ ಅದು ಎಂದಿಗೂ ಬರಲೊಲ್ಲದು. ನೀನು ಇನ್ನೂ ಹುಡುಗ; ದುಡುಕಿ ಕೆಲಸಮಾಡಬೇಡ, ಕಂಡೆಯಾ ?

ರಂಗ—(ಕೊಂಚಹೊತ್ತು ಪರ್ಯಾಲೋಚಿಸಿ) ಮಾಮು ! ನಾನು ಈಗ ಮಾಡಬೇಕಾದುದೇನು ?

ರಮಾ—ಕೆಲವು ತಿಂಗಳುಗಳಿಂದಲೂ ನನಗೆ ತುಂಬಾ ನಿರ್ಬಂಧದ ಪತ್ರಗಳು ಬರುತ್ತಿರುವುವು. ಇನ್ನು ತಡಮಾಡುವುದು ನಮಗೆ ತರವಲ್ಲ, ಗೌರವವೂ ಅಲ್ಲ.

ರಂಗ—ನನ್ನಲ್ಲಿ ಇಷ್ಟು ಉದಾಸೀನವೇಕೆ ! ನಾನಾರು ? ದಯೆಯಿಟ್ಟು ತಿಳಿಸೋಣವಾಗಲಿ.

ರಮಾ—ನಾನು ಖಂಡಿತವಾಗಿಯೂ ತಿಳಿಸಲಾರೆ. ನನ್ನ ಬಳಿಯಲ್ಲಿ ನಿನ್ನದಾಗಿ ಒಂದು ಪೆಟ್ಟಿಗೆಯಿರುವುದು. ಅದರಲ್ಲಿ ಏನಿರುವುದೋ ನೋಡುವ. ನಿನ್ನ ದೊಡ್ಡಪ್ಪನು ನಿನಗೆ ಮಾಡಿದ ತೊಂದರೆಗಳು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ.

ರಂಗ—ತಾವು ನನ್ನ ದೊಡ್ಡಪ್ಪನ ಮೇಲೆ ಹೀಗೆ ತಪ್ಪನ್ನು ಹೊರಿಸಬಾರದು. ಆತನು ನನಗೆ ಮಹೋಪಕಾರವನ್ನೇ ಮಾಡಿರುವನು. ಆತನು ನನ್ನನ್ನು ಪ್ರೀತಿಸುತ್ತಿದ್ದ ಹಾಗೆ ಮತ್ತಾರೂ ಪ್ರೀತಿಸರು.

ರಮಾ—ರಂಗರಾಜ ! ಅದು ಹೇಗಾದರೂ ಇರಲಿ. ನೀನು ಮಟ್ಟಿಗೆ ನನ್ನನ್ನು ಮರೆಯಬೇಡ. ನನಗಾದರೋ ನಿನ್ನ ಹೊರತು ಮತ್ತಾರು ದಿಕ್ಕಿಲ್ಲ.

ರಂಗ—ಮಾವ ! ನಾನು ಇನ್ನೂ ಲೋಕದ ರೀತಿನೀತಿಗಳನ್ನು ಅರಿಯದ ಹುಡುಗನು. ಎಲ್ಲವನ್ನೂ ತಿಳಿದ ನೀವು ನನಗೆ ಸರಿಯಾಗಿ ಬುದ್ಧಿಗಲಿಸಿ ಮನುಷ್ಯನನ್ನಾಗಿ ಮಾಡಬೇಕು. ನಾನು ಅಚಾತುರ್ಯದಿಂದ ಒಂದೆರಡು ಮಾತುಗಳನ್ನಾಡಿರಬಹುದು. ನೀವು ಮಟ್ಟಿಗೆ ಅದನ್ನು ಗಮನಕ್ಕೆ ತರಬಾರದು.

ರಮಾ—ರಂಗರಾಜ ! ನಿನ್ನ ಸ್ವಭಾವವನ್ನು ಅರಿಯುವುದಕ್ಕಾಗಿಯೇ ನಿನ್ನ ದೊಡ್ಡಪ್ಪನ ವಿಷಯವಾಗಿ ಮಾತನಾಡಿದೆನು. ಆತನು ಬಲು ದೊಡ್ಡ ಮನುಷ್ಯನು.

ರಂಗ—ಮಾವ ! ನನ್ನ ದೊಡ್ಡಪ್ಪನು ನನಗಾಗಿ ಒಂದು ಪೆಟ್ಟಿಗೆಯನ್ನು ನಿಮ್ಮಲ್ಲಿಟ್ಟಿರುವುದಾಗಿ ತಾವು ತಿಳಿಸೋಣವಾಯಿತಲ್ಲವೇ ?

ರಮಾ—ಅಹುದು.

ರಮಾರಮಣನು ಹೀಗೆ ಹೇಳಿ ಆ ಪೆಟ್ಟಿಗೆಯನ್ನು ತರುವುದಕ್ಕಾಗಿ ಬೇರೊಂದೆಡೆಗೆ ಹೊರಟನು. ರಂಗರಾಜನು ಸುಖದುಃಖಗಳ ಮಧ್ಯದಲ್ಲಿ ಡೋಲಾಯಮಾನವಾದ ಮನಸ್ಸುಳ್ಳವನಾಗಿ ಭೂಮ್ಯಾಕಾಶಗಳನ್ನು ಚಿಂತಿಸುತ್ತಾ ಕುಳಿತನು.

# ಒಂಬತ್ತನೆಯ ಅಧ್ಯಾಯ.

**ಪೂರ್ವಕಥಾನುವಾದ. ಆನಂದ ತುಂದಾಕಿನಿ.**

ರಮಾರಮಣನು ಪೆಟ್ಟಿಗೆಯನ್ನು ತರುವುದಕ್ಕೆಂದು ಬೇರೆಯ ಕಡೆಗೆ ಹೊರಟುಹೋದಾಗ ರಂಗರಾಜನ ಮನದಲ್ಲಿ ಉಂಟಾದ ಭಾವನೆಯು ಏನೆಂದರೆ—

" ನನಗೆ ಅಧಿಕಾರವೂ ಸಂಪತ್ತೂ ಇರುವುದಾಗಿ ನನ್ನ ಮಾಮನು ಹೇಳುತ್ತಿರುವನು. ಇದು ನಿಶ್ಚಯವೇ ಆಗಿರುವುದಾದರೆ, ನನ್ನ ಹೊಟ್ಟೆಯ ಪಾಡಿನ ಕಷ್ಟಗಳೆಲ್ಲವೂ ದೂರ ತೊಲಗಿದಂತಾದುವು. ನನಗೂ ಲೋಕದಲ್ಲಿ ಒಂದು ಗಣ್ಯವಾದ ಪದವಿಯಿರುವುದೆಂದು ತೋರುತ್ತಿರುವುದು. ಇನ್ನು ಮೇಲೆ ನಾನು ಸುಂಕದ ಕಟ್ಟೆಯ ನೌಕರನಲ್ಲವಷ್ಟೇ? ಅಕಟಕಟಾ ! ಈಗ ಅದನ್ನು ಜ್ಞಾಪಿಸಿಕೊಂಡರೆ ಮೈಯೆಲ್ಲವೂ ರೋಮಾಂಚಿತವಾಗುವುದು. ಅಕಾಂಡವಾಗಿ ದೈವವು ನನ್ನನ್ನು ಆವ ಸ್ಥಿತಿಗೆ ತಂದುಬಿಟ್ಟಿತು ! ದೈವವು ಹೋದುದೇ ದಾರಿ, ಮಾಡಿದುದೇ ಕೆಲಸ. ದೈವಕ್ಕೆ ಕಣ್ಣಿಲ್ಲವೆಂದು ಹೇಳುವ ಮಾತು ಸಹಜವಾಗಿಯೇ ಇರುವುದು. ಮಾನವನು ತಾನೇ ಬುದ್ಧಿಮಂತನೆಂದು ಹೆಮ್ಮೆಪಡುವನು. ಇಷ್ಟಾದರೂ ದೈವದ ಗತಿಯು ಕೊಂಚವಾದರೂ ಗೊತ್ತಾಗಲೊಲ್ಲದು. ಉತ್ತರಕ್ಷಣದಲ್ಲಿ ನಡೆಯುವುದನ್ನು ಅರಿತುಕೊಳ್ಳಲಾರದ ಮಾನವನ ಬುದ್ಧಿಯು ಅದೊಂದು ಬುದ್ಧಿಯೇ ! ಇದಕ್ಕಾಗಿ ಮಾನವನು ಹೆಮ್ಮೆಪಡುವುದೇಕೋ ನನಗೊಂದೂ ಗೊತ್ತಾಗದು."

ರಂಗರಾಜನು ಈ ರೀತಿಯಾಗಿ ಚಿಂತಿಸುತ್ತಾ ಕುಳಿತಿರುವಲ್ಲಿ, ರಮಾರಮಣನು ಪೆಟ್ಟಿಗೆಯೊಂದನ್ನು ಹಿಡಿದುಕೊಂಡು ಬಂದನು. ರಂಗರಾಜನೂ ಅದನ್ನೇ ಇದಿರುನೋಡುತ್ತಾ ಕುಳಿತಿದ್ದನು.

ರಮಾರಮಣನು ಬಂದೊಡನೆಯೇ ರಂಗರಾಜನನ್ನು ಕುರಿತು—ಮಗು ! ದೇವರಾಜನು ನನಗಾಗಿ ಒಂದು ಕಾಗದವನ್ನು ನಿನ್ನಲ್ಲಿ ಕೊಟ್ಟಿರುವನು. ಈಗ ನೀನು ಆ ಕಾಗದವನ್ನು ತಂದಿರುವೆಯಾ ?

ರಂಗ—ತಂದಿರುವೆನು.

ರಂಗರಾಜ ಹೀಗೆ ಹೇಳಿ ಮೊಹರು ಮಾಡಿದ್ದ ಕಾಗದವನ್ನು ರಮಾರಮಣನ ಕೈಗೆ ಕೊಟ್ಟು, ತನ್ನ ಪೂರ್ವವೃತ್ತಾಂತವೆಲ್ಲವನ್ನೂ ಒಂದೂ ಬಿಡದ

ಹಾಗೆ ತಿಳಿಸಿದನು. ರಮಾರಮಣನು ರಂಗರಾಜನ ಮಾತನ್ನು ಆದರದಿಂದ ಕೇಳುತ್ತಿದ್ದು, ಸೋದರಳಿಯನ ಮಾತು ಮುಗಿದ ಮೇಲೆ ಇಂತೆಂದನು:—

"ಮಗು ! ದೇವರಾಜನು ನಿನಗೆ ಪರಿಪರಿಯಾಗಿ ತೊಂದರೆಯಿತ್ತನು. ಇದರಲ್ಲಿ ಕೊಂಚವಾದರೂ ಸಂಶಯವಿಲ್ಲ. ಆತನು ಹೀಗೆ ಮಾಡುವುದಕ್ಕೆ ಅನೇಕ ಕಾರಣಗಳುಂಟು. ಲೋಕದಲ್ಲಿ ಮನುಷ್ಯನಾಗಿ ಹುಟ್ಟಿ ಕಷ್ಟಗಳನ್ನು ಅನುಭವಿಸದ ಮೇಲೆ, ಆತನಿಗೆ ಸುಖದ ಯೋಗ್ಯತೆಯೇ ಗೊತ್ತಾಗುವುದಿಲ್ಲ. ಬಿಸಿಲಿನಲ್ಲಿ ಬೆಂದು ಬಳಲಿ ಬೆಂಡಾದವನೊಬ್ಬನೇ ನೆರಳಿನ ಸುಖವನ್ನು ಚೆನ್ನಾಗಿಯೂ ಅನುಭವಿಸಬಲ್ಲನು. ಲೋಕದ ಕಷ್ಟಗಳನ್ನರಿಯದವನ ಕೈಯಲ್ಲಿ ವಿಪುಲವಾದ ಸಂಪತ್ತನ್ನು ಕೊಟ್ಟರೆ, ಅಂತಹವನು ಹಣವನ್ನು ಸರಿಯಾಗಿ ಉಪಯೋಗಿಸಿ ಸುಖಪಡಲಾರನು. ಅದುಕಾರಣವೇ ದೇವರಾಜನು ನಿನಗೆ ಪ್ರಪಂಚಾನುಭವವನ್ನುಂಟುಮಾಡಿಕೊಡುವುದಕ್ಕಾಗಿಯೇ ನಿನ್ನನ್ನು ಕಷ್ಟಕ್ಕೆ ಈಡುಮಾಡಿದನು ಈತೆರನಾದ ಬಾಲ್ಯದ ವಿದ್ಯಾಭ್ಯಾಸವೇ ಇಹಪರ ಶ್ರೇಯಸ್ಸಿಗೆ ಸಾಧನವು ಲೋಕದಲ್ಲಿ ಅನೇಕ ಧನವಂತರು ಹೀಗೆ ವರ್ತಿಸದಿರುವುದರಿಂದಲೇ, ಹಣಕ್ಕೆ ಅಪಯಶಸ್ಸು ಬಂದಿರುವುದು. ಗಳಿಸಿಟ್ಟ ಹಣವನ್ನು ಸದುಪಯೋಗಪಡಿಸುವುದಾಗಲಿ, ದುರುಪಯೋಗಪಡಿಸುವುದಾಗಲಿ, ವೆಚ್ಚಮಾಡತಕ್ಕವನ ಸ್ವಭಾವವನ್ನು ಅನುಸರಿಸಿರುವುದು. ಒಳ್ಳೆಯವನು ಹಣದಿಂದ ತನ್ನ ಒಳ್ಳೆಯತನವನ್ನು ಹೆಚ್ಚಿಸಿಕೊಳ್ಳುವನು; ಕೆಟ್ಟವನು ಹಣದಿಂದ ತನ್ನ ಕೆಟ್ಟತನವನ್ನು ಹೆಚ್ಚಿಸಿಕೊಳ್ಳುವನು. ನಿರ್ಜೀವವಾದ ಹಣದಲ್ಲಿರುವುದೇನು ?"

ರಂಗ—ನನ್ನ ಅಭಿಪ್ರಾಯವೂ ಇದೇಯಾಗಿರುವುದು.

ರಮಾ—ಆದರೆ ಕೋಟಿಗಟ್ಟಳೆ ವರಮಾನವಿರತಕ್ಕ ಸಂಪತ್ಕುಮಾರನನ್ನು ಹೀಗೆ ಬೀದಿಯ ಬಿಕಾರಿಯನ್ನಾಗಿ ಮಾಡಬಾರದು. ಒಂದು ವೇಳೆ ದುರ್ಯೋಗದಿಂದ ಅಪಾಯವು ಸಂಭವಿಸಿದ್ದರೆ, ಈ ದೋಷಕ್ಕೆ ಆರನ್ನು ಶೂಲಕ್ಕೆ ಆರೋಪಿಸಬೇಕು ? ನೀನೇನೋ ಗಟ್ಟಿಗನಾದುದರಿಂದ ಬದುಕಿ ಬಂದೆ. ಬಲಹೀನರ ಪಾಡೇನಾಗಬೇಕು ?

ರಂಗ—ಮಾಮ ! ನನ್ನ ಬಲಾಬಲಗಳನ್ನರಿತೆಯೇ ನನ್ನ ದೊಡ್ಡಪ್ಪನು ಈ ಬಗೆಯಾದ ಪಾಠಗಳನ್ನು ಕಲಿಸಿದನು. ನಾನು ಬಲಹೀನನಾಗಿದ್ದಿದ್ದರೆ, ಆ ಮಾರ್ಗವೇ ಬೇರೆಯಾಗಿರುತ್ತಿದ್ದಿತು.

ರಮಾ—ಹೇಗಾದರೂ ಆಗಲಿ, ಎಲ್ಲವೂ ದೈವಯೋಗದಿಂದ ಸುಮುಖವಾಗಿಯೇ ಪರಿಣಮಿಸಿದುದರಿಂದ ನಾವು ಭಗವಂತನನ್ನು ಭಕ್ತಿಭಾವದಿಂದ ಕೊಂಡಾಡತಕ್ಕುದಿದೆ.

ರಂಗ—ಮಾಮ ! ಪೆಟ್ಟಿಗೆಯ ವಿಷಯದಲ್ಲಿ ನನ್ನ ಮನವು ತವಕಪಡುತ್ತಿರುವುದು.

ರಮಾ—ಹಾಗೆಯೇ ? ಹಾಗಾದರೆ ಅದನ್ನು ತೆರೆದು, ದೇವರಾಜನು ನಿನ್ನ ಭವಿಷ್ಯತ್ತನ್ನು ಹೇಗೆ ತೀರ್ಮಾನಿಸಿರುವನೋ ನೋಡುವ.

ರಮಾರಮಣನು ಹೀಗೆ ಹೇಳಿ ಅಲ್ಲಿನ ದೊಡ್ಡದೊಡ್ಡ ಅಧಿಕಾರಿಗಳಿಗೆ ರಂಗರಾಜನ ಪರಿಚಯವನ್ನುಂಟುಮಾಡಿಕೊಟ್ಟನು. ಎಲ್ಲರೂ ರಂಗರಾಜನನ್ನು ಗೌರವದಿಂದ ಸನ್ಮಾನಿಸಿದರು. ಮರುದಿನವೇ ರಂಗರಾಜನಿಗೆ ಔತಣ ಮಾಡಬೇಕೆಂದು ಎಲ್ಲರೂ ಅಭಿಪ್ರಾಯಪಟ್ಟುದರ ಮೇಲೆ ರಮಾರಮಣನು ಅದಕ್ಕೆ ತಕ್ಕ ಏರ್ಪಾಡನ್ನು ಮಾಡತೊಡಗಿದನು. ರಂಗರಾಜನು ನಿಕ್ಷೇಪ ರಕ್ಷಣಸಮಿತಿಯ ಮುಖ್ಯಾಧಿಕಾರಿಯಾದ ರಮಾರಮಣರಾಯನ ಅಪ್ಪಣೆಯನ್ನು ತೆಗೆದುಕೊಂಡು ಹೊರಡುವುದಕ್ಕೆ ಸಿದ್ಧನಾಗಲು, ರಮಾರಮಣನು ತಾತ್ಕಾಲಿಕವಾದ ವೆಚ್ಚಕ್ಕೆಂದು ಒಂದು ಸಾವಿರ ಸುವರ್ಣ ನಾಣ್ಯಗಳನ್ನು ರಂಗರಾಜನಿಗೆ ಕೊಟ್ಟನು. ರಂಗರಾಜನು ಅದನ್ನು ತಿರಸ್ಕರಿಸುವುದಕ್ಕೆ ಸಾಹಸವಿಲ್ಲದವನಾಗಿ ಅದನ್ನು ತೆಗೆದುಕೊಂಡು ಹೊರಡಲು ಸಿದ್ಧನಾದನು. ಸಮಿತಿಯ ಅಧಿಕಾರಿಗಳೆಲ್ಲರೂ ರಂಗರಾಜನನ್ನು ತಲೆವಾಗಿಲವರೆಗೂ ಕರೆತಂದುಬಿಟ್ಟರು. ರಂಗರಾಜನು ಎಲ್ಲರಿಗೂ ವಂದನೆಯನ್ನರ್ಪಿಸಿ ತನ್ನ ಆವಾಸಸ್ಥಾನಕ್ಕೆ ಬಂದನು. ಆತನು ಬರುವಾಗ ಪೆಟ್ಟಿಗೆಯನ್ನು ತೆಗೆದುಕೊಂಡು ಬಂದನೆಂದು ಹೇಳಬೇಕಾದುದೇನೂ ಇರುವುದಿಲ್ಲ.

ರಂಗರಾಜನು ತಾನು ಇಳಿದಿದ್ದ ಸ್ಥಳಕ್ಕೆ ಬಂದು ಕುಳಿತುಕೊಂಡು ಆಲೋಚಿಸಿದನು —

" ನಾನೆಂತಹ ಮೂರ್ಖನು ! ಕೆಲವು ತಿಂಗಳುಗಳಿಗೆ ಮುಂಚಿತವಾಗಿಯೇ ನಾನು ಈ ಕೆಲಸವನ್ನು ಮಾಡಬಾರದಾಗಿದ್ದಿತೇ ! ನಾನು ಹಾಗೆ ಮಾಡಿದ್ದಿದ್ದರೆ, ವಿಲಾಸಿನಿಯು ಪರಸ್ತ್ರೀಯಾಗುತ್ತಿದ್ದಳೇ ! ಈಗ ಆ ವಿಷಯವನ್ನು ಎತ್ತಿ ಮಾತನಾಡಿ ಪ್ರಯೋಜನವೇನು ? ಕೆಲವು ದಿನಗಳೊಳಗಾಗಿ ವಿಲಾಸಿನಿಯು ಅನಂದಾವತಿಯ ಧನಿಕನನ್ನು ಮದುವೆಯಾಗಿಬಿಡುವಳು. ಬಳಿಕ

ನಾನು ಆಕೆಯನ್ನು ನೋಡುವ ಸಂಭವವುಂಟಾದಲ್ಲಿ, ಆಕೆಯನ್ನು ನಾನು ಸಹೋದರಿಯೆಂದಲ್ಲವೇ ಪ್ರೀತಿಸಬೇಕು ! ಹಾದೈವವೇ ! ನನ್ನ ಪ್ರೀತಿಯು ಎಂತಹ ದಾರುಣವಾದ ವಿಪರಿಣಾಮವನ್ನು ಹೊಂದಿತು. ಇದಕ್ಕಾಗಿ ನಾನು ಆರನ್ನು ನಿಂದಿಸಲಿ ? ಈಗ ಅದರಿಂದಾಗುವುದೇನು ?

ಈಗ ನನಗಾದರೋ ಮಹತ್ತಾದ ಯೋಗವು ಕಾದುಕೊಂಡಿರುವುದು. ಇದಕ್ಕಾಗಿ ನನ್ನ ದೊಡ್ಡಪ್ಪನು ಮಾಡಿದ ಮಹೋಪಕಾರವು ಚಿರಸ್ಮರಣೀಯ ವಾದುದು. ನನ್ನ ದೊಡ್ಡಪ್ಪನು ಈ ಪೆಟ್ಟಿಗೆಯಲ್ಲಿ ನನ್ನ ವಂಶಾನುಚರಿತ ವನ್ನು ಬರೆದಿಟ್ಟಿರಬಹುದು. ಇದು ನನಗೆ ಮೊದಲೇ ತಿಳಿದಿದ್ದರೆ ಚೆನ್ನಾಗಿ ರುತ್ತಿದ್ದಿತು. ಈಗ ನನ್ನಸುಖದ ಕಾಲವು ಮೀರಿಹೋದುದರಿಂದ, ನನ್ನ ಚರಿ ತ್ರೆಯನ್ನು ತಿಳಿದರೆ ಎಷ್ಟು ಪ್ರಯೋಜನವೋ ತಿಳಿಯದಿದ್ದರೂ ಅಷ್ಟೇ ಪ್ರಯೋಜನವು. ಒಂದಣದು ತಪ್ಪೆಂದು ಮುಂದಕ್ಕೂ ತಪ್ಪನ್ನೇ ಮಾಡು ವುದು. ಅವಿವೇಕಿಯ ಕೆಲಸವು. ಇನ್ನು ನಾನು ವಿವೇಕವನ್ನು ತಂದುಕೊಂಡು ಬೇರೊಂದು ಮಾರ್ಗದಿಂದಲಾದರೂ ಸುಖವಾಗಿರುವುದಕ್ಕೆ ಏರ್ಪಡಿಸಿಕೊ ಳ್ಳುವೆನು. ವಿಲಾಸಿನಿಯು ದೊರೆತಿದ್ದರೆ ಚೆನ್ನಾಗಿದ್ದಿತು. ಪ್ರಥಮಪ್ರೀತಿಯು ಒಡೆದುಹೋದ ಮೇಲೆ, ಸಲ್ಲದ ಪ್ರೀತಿಯನ್ನು ನಟಿಸಿ ಸಂಸಾರವನ್ನು ನಿರ್ವ ಹಿಸಿಕೊಂಡು ಕಾಲವನ್ನು ತಳ್ಳಬೇಕಾಗಿ ಬಂದು ಸೇರಿತು. ವಿಲಾಸಿನಿಯು ಸಾಮಾನ್ಯಸ್ತ್ರೀಯಲ್ಲ , ವಿಲಾಸಿನಿಯು ದೇವಲೋಕದ ದೇವತಾವಿಶೇಷವು. ಈಕೆಯನ್ನು ಅರ್ಧಾಂಗಿಯನ್ನಾಗಿ ಮಾಡಿಕೊಂಡು ಸಂಸಾರ ಮಾಡುವುದಕ್ಕೆ ಅನೇಕ ಜನ್ಮಾರ್ಜಿತವಾದ ಭಾಗ್ಯೋದಯವಿರಬೇಕು. ನನ್ನ ಹಣೆಯಲ್ಲಿ ಅಂತಹ ಭಾಗ್ಯರೇಖೆಯು ಎಲ್ಲಿಂದ ಬರೆಯಲ್ಪಡಬೇಕು ? ನಾನು ಮಾಡಿರುವ ಪುಣ್ಯವಾದರೂ ಅಷ್ಟರಲ್ಲಿಯೇ ಇರುವುದು. ಪುಣ್ಯಮಾಡದೆಯೇ ಪುಣ್ಯದ ಫಲವನ್ನು ನಾನು ಬಯಸಿದರೆ ಅದು ಲಭಿಸುವುದಂದರೇನು ? ನಾನು ಆಕೆ ಯನ್ನು ಖಂಡಿತವಾಗಿಯೂ ಮರೆಯಲೇ ಬೇಕು, ಇಲ್ಲವಾದರೆ ನನ್ನ ಪರಿಣಾ ಮವು ನೆಟ್ಟಗಾಗಲಿಕ್ಕಿಲ್ಲ. ”

ರಂಗರಾಜನು ಈ ರೀತಿಯಾಗಿ ಆಲೋಚಿಸಿ ರಾತ್ರಿಯಾಗುವುದನ್ನೇ ನಿರೀ ಕ್ಷಿಸಿಕೊಂಡಿದ್ದನು. ಕಾಲಕ್ರಮದಲ್ಲಿ ರಾತ್ರಿಯಾಗಿ ಅರ್ಧರಾತ್ರದ ಸಮಯ ವೂ ಬರುವುದರಲ್ಲಿದ್ದಿತು.

ರಂಗರಾಜನು ತನ್ನ ಹಾಸುಗೆಯ ಮೇಲೆ ಕುಳಿತುಕೊಂಡು ಆ ಪೆಟ್ಟಿಗೆ ಯನ್ನು ತೆರೆದನು.

ಆ ಪೆಟ್ಟಿಗೆಯಲ್ಲಿ ದೇವರಾಜನು ಬರೆದಿಟ್ಟಿದ್ದ ವಿಷಯಗಳಿಂದ ತಿಳಿದು ಬಂದುದೇನೆಂದರೆ:—

"ಬಹು ಪುರಾತನ ಕಾಲದಿಂದಲೂ ಈ ಭರತ ಭೂಖಂಡವು ಸೂರ್ಯವಂಶದ ಅರಸರಿಂದಲೂ ಚಂದ್ರವಂಶದ ಅರಸರಿಂದಲೂ ಪರಿಪಾಲಿಸಲ್ಪಡುತ್ತಿರುವುದು. ಇವೆರಡು ವಂಶಗಳಲ್ಲಿ ಚಂದ್ರವಂಶವೇ ಅಪರಿಮಿತವಾದುದು. ಅನೇಕ ಶತಮಾನಗಳ ಕಾಲ ಚಂದ್ರವಂಶದ ರಾಜರು ರಾಜ್ಯಭಾರ ಮಾಡಿದ ಬಳಿಕ, ಈ ವಂಶವು ಕಾರಣಾಂತರದಿಂದ ಶುಕ್ಲ ಕುಲವೆಂದೂ ಕೃಷ್ಣಕುಲವೆಂದೂ ಇಬ್ಬಗೆಯಾಯಿತು. ಶುಕ್ಲ ಕುಲದವರು ಭಾರತ ಭೂಮಿಯ ಪೂರ್ವಾರ್ಧಭಾಗವನ್ನೂ ಕೃಷ್ಣಕುಲದವರು ಪಶ್ಚಿಮಾರ್ಧಭಾಗವನ್ನೂ ರಾಜಕಾರ್ಯಕ್ಕಾಗಿ ವಿಭಾಗಮಾಡಿಕೊಂಡರು. ವಿದ್ಯಾನಗರವೆಂಬುದು ಶುಕ್ಲಕುಲದ ಅರಸರಿಗೆ ರಾಜಧಾನಿಯು.

ಕೆಲವು ವರ್ಷಗಳ ಹಿಂದೆ ದ್ವಿಜರಾಜನೆಂಬ ಜನಪದೇಶ ಶುಕ್ಲಕುಲದ ಮಹಾರಾಜನು ಧರ್ಮದಿಂದ ಬಹುಕಾಲ ರಾಜ್ಯಭಾರ ಮಾಡಿದನು. ಆತನಿಗೆ ದೇವರಾಜನೆಂದೂ ರಾಜರಾಜನೆಂದೂ ಇಬ್ಬರು ಕುಮಾರರು ಜನಿಸಿದರು. ಅವರಲ್ಲಿ ದೇವರಾಜನು ಸ್ವಭಾವದಿಂದ ಸಾತ್ವಿಕನಾಗಿ ವಿರಕ್ತಭಾವದಿಂದ ತೀರ್ಥಯಾತ್ರೆಗೆಂದು ಸಂಚಾರಮಾಡತೊಡಗಿದನು. ರಾಜರಾಜನು ತಂದೆಯ ಬಳಿಯಲ್ಲಿಯೇ ಇದ್ದುಕೊಂಡು ಬಾಲ್ಯೋಚಿತವಾದ ವಿದ್ಯೆಗಳನ್ನು ಅಭ್ಯಾಸ ಮಾಡಿದ ಬಳಿಕ ಯೌವನ ದಶೆಯಲ್ಲಿ ದೇಶಾಟನೆಗಾಗಿ ಕಳುಹಲ್ಪಟ್ಟನು. ರಾಜರಾಜನು ಅನೇಕ ದೇಶಗಳನ್ನು ಸುತ್ತಿಕೊಂಡು ಅಮರಾವತಿಗೆ ಬರಲು, ಅಲ್ಲಿ ಮಂಗಳ ದೇವಿಯೆಂಬ ಸರ್ವಾಂಗ ಸುಂದರಿಯಾದ ಯುವತಿಯೊಬ್ಬಳು ಆತನ ಪ್ರೇಮಕಟಾಕ್ಷಕ್ಕೆ ಈಡಾದಳು. ದಿನದಿನಕ್ಕೆ ಅವರಿಬ್ಬರ ಪ್ರೇಮರಸವು ಹೆಚ್ಚಿತು. ಬಳಿಕ ಅವರಿಬ್ಬರೂ ಅಗ್ನಿಸಾಕ್ಷಿಕವಾಗಿ ಪತಿಪತ್ನಿಯರಾಗಲು ಸಮ್ಮತಿಸಿದರು. ರಾಜರಾಜನು ಈ ಸುದ್ದಿಯನ್ನು ಮಹಾರಾಜನಿಗೆ ತಿಳಿಸಿದನು. ಮಹಾರಾಜನು ರಾಜರಾಜನ ಪತ್ರವನ್ನು ನೋಡಿ ರೇಗಿ ರೇಗಿಬಿದ್ದವನಾಗಿ ತನ್ನ ಇಷ್ಟಕ್ಕೆ ವಿರೋಧವಾಗಿ ವಿವಾಹಮಾಡಿಕೊಳ್ಳುವುದಾದರೆ ಅನರ್ಥವಾಗುವುದೆಂದೂ, ರಾಜ್ಯದ ಮೇಲೆ ಬಾಧ್ಯತೆಯೇ ತಪ್ಪಿಹೋಗುವುದೆಂದೂ, ಇದರ ಮೇಲೂ ತಂದೆಯ ಆಗ್ರಹಕ್ಕೆ ಪಾತ್ರವಾಗಬೇಕೆಂದೂ ಭಯೋತ್ಪಾದಕವಾದ ಪ್ರತ್ಯುತ್ತರವನ್ನು ಕಳುಹಿದನು. ಪ್ರೇಮಾವೇಶಪರ

ವಶನಾದ ರಾಜರಾಜನು ತಂದೆ ಬರೆದ ಪ್ರತ್ಯುತ್ತರವನ್ನು ನೋಡಿ ಕೊಂಚವೂ ಹೆದರದವನಾಗಿ ಶಾಸ್ತ್ರೋಕ್ತವಿಧಿಯಿಂದ ಮಂಗಳದೇವಿಯನ್ನು ವಿವಾಹ ಮಾಡಿಕೊಂಡು ತಂದೆಗೆ ಮತ್ತೊಂದು ಪತ್ರವನ್ನು ಬರೆದನು. ಅದು ಈರೀತಿಯಾಗಿದ್ದಿತು—

"ಪೂಜ್ಯಪಾದರಲ್ಲಿ ಅಧಮನ ಸಾಷ್ಟಾಂಗ ಪ್ರಣಾಮಗಳು. ತಮ್ಮ ಪತ್ರವು ಕೈಸೇರಿ ಸಕಲವೂ ಅಭಿಪ್ರಾಯವಾಯಿತು ಈ ವಿಷಯದಲ್ಲಿ ನಾನು ತಮ್ಮಲ್ಲಿ ಅರಿಕೆಮಾಡಿಕೊಳ್ಳುವುದೇನೆಂದರೆ—ಲೋಕದಲ್ಲಿ ಪ್ರೇಮಾನುಬಂಧ ವೆಂಬುದು ಎಲ್ಲಾ ಶಕ್ತಿಗಳಿಗಿಂತಲೂ ಪ್ರಬಲವಾದುದು. ಅದು ರೂಢ ಮೂಲವಾಯಿತೆಂದರೆ, ಅದನ್ನು ಕಿತ್ತು ದೂರ ಬಿಸುಡುವುದಕ್ಕೆ ಹರಿಹರ ಬ್ರಹ್ಮಾದಿಗಳಿಗೂ ಸಾಧ್ಯವಾಗಲಾರದು—ಎಂದಮೇಲೆ, ಮಾನವನ ಕೋಪ ತಾಪಗಳೂ, ಗುಡ್ಡಿನ ಬೆದರಿಕೆಗಳೂ ಏನ ಮಾಡಾವು? ಈ ಸುಖಸಾಮ್ರಾಜ್ಯದಲ್ಲಿ ಏಕಾಧಿಪತ್ಯಮಾಡುತ್ತಿರುವ ನನಗೆ ಗೋಷ್ಪದದಂತಿರುವ ತಮ್ಮ ರಾಜ್ಯದಿಂದಾಗುವುದೇನು? ನಾವು ತಮ್ಮ ರಾಜ್ಯಕ್ಕೆ ಅರಸನ್ನಾದರೂ ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳುವುದಕ್ಕೆ ನನ್ನ ಅಡ್ಡಿಯೇನೂ ಇರುವುದಿಲ್ಲ. ಮಕ್ಕಳ ಸುಖವೇ ತನ್ನ ಸುಖವೆಂದು ತಿಳಿದುಕೊಳ್ಳದ ತಂದೆಯ ಬಳಿಯಲ್ಲಿ ನಾವು ವಾಸಮಾಡಿಕೊಂಡಿರುವುದಕ್ಕಿಂತಲೂ ಎಲ್ಲಿಯಾದರೂ ಭಿಕ್ಷೆಬೇಡಿ ಜೀವಿಸುವುದು ಮೇಲೆನಿಸುವುದು. ತಾವು ಇನ್ನು ಮೇಲೆ ನನಗಾಗಿ ಚಿಂತಿಸಬೇಕಾದುದಿಲ್ಲ. ನನ್ನ ಹಣೆಯಲ್ಲಿ ಬರೆದಂತಾಗಲಿ. ಈ ಪತ್ರದಿಂದ ನಾನು ತಮಗೆ ಚರಮಪ್ರಣಾಮವನ್ನು ಅರ್ಪಿಸಿಕೊಳ್ಳುವವನಾಗಿರುವೆನು.

" ಇತಿ ತಮ್ಮ ಆಗ್ರಹಕ್ಕೆ ಪಾತ್ರವೆನಿಸಿರುವ,

" ರಾಜರಾಜ. "

ರಾಜರಾಜನು ಈರೀತಿಯಾಗಿ ಪತ್ರವನ್ನು ಬರೆದು ಸಾಮಾನ್ಯನಂತೆ ಒಂದು ಮನೆಯನ್ನು ಮಾಡಿಕೊಂಡು ಹೆಂಡತಿಯೊಡನೆ ಸಂಸಾರ ಮಾಡತೊಡಗಿದನು. ಕಾಲಕ್ರಮದಲ್ಲಿ ಅವರಿಬ್ಬರಿಗೂ ಒಂದು ಮಗುವಾಯಿತು. ಆ ಮಗುವಿಗೆ ಎರಡು ವರ್ಷಗಳು ತುಂಬುತ್ತಿರಲು, ದೇವರಾಜನು ಮಾರ್ಗವಶದಿಂದಅಮರಾವತಿಗೆಬಂದನು. ದೈವಯೋಗದಿಂದ ಅಣ್ಣಾತಮ್ಮಂದಿರಿಬ್ಬರಿಗೂ ಒಂದೆಡೆಯಲ್ಲಿ ಸಮಾಗಮವಾಯಿತು. ರಾಜರಾಜನು ದೇವರಾಜನಿಗೆ ನಡೆದುದೆಲ್ಲವನ್ನೂ ವಿಶದವಾಗಿ ತಿಳಿಸಿದನು. ದೇವರಾಜನು ರಾಜರಾಜನ ಮನೆಗೆ

ಬಂದು ಮಂಗಳದೇವಿಯನ್ನೂ ಮಗುವನ್ನೂ ನೋಡಿ ಬಲುವಾಗಿ ಸಂತೋಷ ಪಟ್ಟನು. ಬಳಿಕ ರಾಜರಾಜನು ತನ್ನ ದುರ್ದಶೆಯನ್ನು ಅಣ್ಣನಿಗೆ ತಿಳಿಯ ಹೇಳಿ, ತನ್ನ ಮಗುವನ್ನು ಆತನ ಪಾದಮೂಲದಲ್ಲಿ ಸಮರ್ಪಿಸಿ, ತಾನೂ ತನ್ನ ಹೆಂಡತಿಯೂ ಜೀವನಕ್ಕಾಗಿ ದೇಶಾಂತರಕ್ಕೆ ತೆರಳುವುದಾಗಿ ತನ್ನ ಅಭಿಪ್ರಾಯವನ್ನೂ ಸೂಚಿಸಿದನು ದೇವರಾಜನು ಮಗುವಿನ ಅನ್ಯಾದೃಶ ವಾದ ಶುಭಲಕ್ಷಣಗಳನ್ನು ನೋಡಿ ಮಗುವಿನ ಯೋಗಕ್ಷೇಮವನ್ನು ತಾನು ವಹಿಸಿಕೊಳ್ಳುವುದಾಗಿ ಮಾತಕೊಟ್ಟನು. ಇದಾದ ಕೆಲವು ದಿನಗಳೊಳಗಾಗಿ ರಾಜರಾಜನು ತನ್ನ ಹೆಂಡತಿಯೊಡನೆ ಎಲ್ಲಿಗೋ ಹೊರಟುಹೋದನು.

ದೇವರಾಜನು ಈ ಮಗುವನ್ನು ಪರಿಚಾರಕರ ಕೈಯಲ್ಲಿಟ್ಟು ಅದರ ಅಶನವಸನಾದಿಗಳಿಗೆ ತಕ್ಕ ಏರ್ಪಾಡನ್ನು ಮಾಡಿ ಉದ್ಯಾನಗರಕ್ಕೆ ಬಂದನು. ಅಷ್ಟರೊಳಗಾಗಿ, ದ್ವಿಜರಾಜ ಮಹಾರಾಜನು ಕಾಲಾಧೀನನಾಗಿದ್ದನು. ರಾಜ್ಯದ ಆಡಳಿತವೆಲ್ಲವೂ ಜ್ಯೇಷ್ಠಪುತ್ರನಾದ ದೇವರಾಜನ ಮೇಲೆ ಬಿದ್ದಿತು. ವಿರಕ್ತನಾದ ದೇವರಾಜನು ರಾಜ್ಯದ ಭಾರವನ್ನು ಹೊತ್ತುಕೊಂಡು ಏನ ಮಾಡಾನು ? ಆತನು ರಾಜ್ಯಪಟ್ಟಾಭಿಷೇಕಕೆ ಸಮ್ಮತಿಪದೆ, ತನ್ನ ತಮ್ಮನ ಮಗನಿಗೆ ರಾಜ್ಯದ ಉತ್ತರಾಧಿಕಾರವನ್ನು ಸಮರ್ಪಿಸಿದನು. ಆ ಮಗುವು ಇನ್ನೂ ಚಿಕ್ಕವನಾಗಿರುವುದರಿಂದ, ಆತನು ತನ್ನ ಇಪ್ಪತ್ತೊಂದನೆಯ ವಯಸ್ಸು ಕಳೆಯುವ ವರೆಗೂ, ರಾಜ್ಯಭಾರವನ್ನು ಸನ್ಮಂತ್ರಿಗಳ ವಶದಲ್ಲಿಟ್ಟು, ದೇವರಾಜನು ಅಮರಾವತಿಗೆ ಬಂದು ಆ ಮಗುವನ್ನು ಸ್ವಾಧೀನಪಡಿಸಿಕೊಂಡನು. ಬಳಿಕ ಅಮರಾವತಿಯಲ್ಲಿಯೇ ಇರುವುದು ತರವಲ್ಲವೆಂದು ದೇವರಾಜನು ರಾಜನಗರಕ್ಕೆ ಎಂಬತ್ತು ಮೈಲಿಗಳ ದೂರದಲ್ಲಿದ್ದ ಕಾಮಿಲಾ ಪುರದ ಆದೊಂದು ಅಭುಕ್ತ ಪ್ರದೇಶದಲ್ಲಿ ಪತನೋನ್ಮುಖವಾಗಿದ್ದ ಹರಕು ಮನೆಯೊಂದನ್ನು ಸುಲಭದ ಬೆಲೆಗೆ ಕೊಂಡುಕೊಂಡು ಆದರಲ್ಲಿ ಎರಡು ವರ್ಷದ ಹುಡುಗನೊಬ್ಬನನ್ನು ಇಟ್ಟುಕೊಂಡು ವಾಸಮಾಡತೊಡಗಿದನು."

ರಂಗರಾಜನು ಈರೀತಿಯಾಗಿ ಉಲ್ಲೇಖಿಸಿದ್ದ ಪತ್ರವನ್ನು ಮೇಲಿಂದ ಮೇಲೆ ಓದಿದ ಬಳಿಕ ಪೆಟ್ಟಿಗೆಯನ್ನು ಚೆನ್ನಾಗಿ ಶೋಧಿಸಿ ನೋಡಿದನು. ಅದರಲ್ಲಿ ಇದಕ್ಕೆ ಸಂಬಂಧಪಟ್ಟ ಇನ್ನೂ ಕೆಲವು ಕಾಗದಗಳು ಕಂಡುಬಂದುವು. ರಂಗರಾಜನು ಇವೆಲ್ಲವನ್ನೂ ಚೆನ್ನಾಗಿ ಭದ್ರಪಡಿಸಿಟ್ಟುಕೊಂಡು— ವಿಲಾಸಿನಿ ! ಇಂತಹ ಸಂತೋಷವನ್ನು ನಿನ್ನ ಜತೆಯಲ್ಲಿದ್ದುಕೊಂಡು ಅನು

ಭವಿಸುವುದಕ್ಕೆ ನನ್ನ ಹಣೆಯಲ್ಲಿ ಬರೆಯದೇ ಹೋಯಿತಲ್ಲಾ! ನೀನು ದುಡುಕದೆ ನನ್ನನ್ನೇ ವರಿಸಿದ್ದರೆ ನನ್ನ ಸಂತೋಷಕ್ಕೆ ಪಾರವೆಲ್ಲಿರುತ್ತಿದ್ದಿತು? ಈಗ ನನಗೆ ಸ್ವರ್ಗದಲ್ಲಿ ನರಕಯಾತನೆಯುಂಟಾಗುತ್ತಿರುವುದು. ವಿಲಾಸ! ವಿಲಾಸ! ನಿನಗಾಗಿ ನನ್ನ ಜನ್ಮವು ಹಾಳಾಗಿಹೋಯಿತು, ಎಂದು ಹಂಬಲಿಸುತ್ತಾ ರಾತ್ರಿಯನ್ನು ಹೇಗೋ ಹಾಗೆ ಕಳೆದನು.

ಬೆಳಗಾಯಿತು. ರಂಗರಾಜನು ಎಂದಿನಂತೆ ತನ್ನ ನಿತ್ಯಕೃತ್ಯಗಳನ್ನು ತೀರಿಸಿಕೊಂಡು ರಮಾರಮಣರಾಯನನ್ನು ನೋಡುವುದಕ್ಕೆ ತೆರಳಿದನು. ರಮಾರಮಣನು ರಂಗರಾಜನ ಆಗಮನವನ್ನೇ ನಿರೀಕ್ಷಿಸಿಕೊಂಡು ಮನೆಯಲ್ಲಿ ಕುಳಿತಿರುವಷ್ಟರಲ್ಲಿ, ರಂಗರಾಜನು ಬಂಗು ಮಾವುನಿಗೆರಗಿ ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಿದನು. ರಮಾರಮಣನಿಗ ಇವೆಲ್ಲವೂ ಮೊದಲಿಂದಲೂ ಗೊತ್ತಿದ್ದಿತಾದರೂ ಆದರದಿಂದ ರಂಗರಾಜನ ಮಾತನ್ನು ಕೇಳಿ ಕಾಲೋಚಿತವಾದ ಒಂದೆರಡು ಬುದ್ಧಿವಾದದ ಮಾತುಗಳನ್ನಾಡಿದನು. ರಂಗರಾಜನು ಅದೆಲ್ಲವನ್ನೂ ವಿನಯದಿಂದ ಕೇಳಿ ಮಾವುನ ಅಪ್ಪಣೆಯನ್ನು ತೆಗೆದುಕೊಂಡು ಸಂಧ್ಯಾಕಾಲದ ಹೊತ್ತಿಗೆ ಮನೆಗೆ ಬಂದು ಸೇರಿದನು. ಹೀಗೆಯೇ ಒಂದು ವಾರದ ಕಾಲವು ಕಳೆದು ಹೋಯಿತು.

ಹೀಗಿರಲೊಂದು ದಿನ ರಂಗರಾಜನು ವಿಹಾರಾರ್ಥವಾಗಿ ರಾಜನಗರದ ರಾಜಬೀದಿಯಲ್ಲಿ ಸಂಚರಿಸುತ್ತಿರುವಾಗ, ಕೆಲವು ಹುಡುಗರು ಒಬ್ಬ ಯುವಕನನ್ನು ಸುತ್ತಿಕೊಂಡು ಆತನಿಗೆ ಬಗೆಬಗೆಯಾಗಿ ಕಿರುಕುಳವನ್ನುಂಟುಮಾಡಿ ಬಟ್ಟೆಬರೆಗಳೆಲ್ಲವನ್ನೂ ಹರಿದು ಓಡಿಹೋದರು. ಆ ಯುವಕನು ಅನನ್ಯಗತಿಕನಾಗಿ ಆ ಹುಡುಗರನ್ನು ಬಾಯಿಗೆ ಬಂದ ಹಾಗೆ ಬಯ್ಯುತ್ತಾ ದಾರಿವಿಡಿದು ಹೋಗುತ್ತಿದ್ದನು. ರಂಗರಾಜನು ಎಲ್ಲಿಯೋ ನೋಡಿದ ಪರಿಚಯದಿಂದ ಬೆನ್ನಟ್ಟಿ ಬಂದು ಆತನ ಹೆಗಲ ಮೇಲೆ ಕೈಯಿಟ್ಟನು. ಇನ್ನೂ ಕೋಪಾವಿಷ್ಟನಾಗಿಯೇ ಇದ್ದ ಆ ಯುವಕನು ತಿರ್ರನೆ ತಿರುಗಿ—ಎಲಾ! ನಿನಗೆ ಗ್ರಹಚಾರವು ಕಡಮೆಯಾದಂತಿದೆ. ಬಂದ ದಾರಿವಿಡಿದು ತೆರಳು, ಇಲ್ಲವಾದರೆ ಈ ಬಚ್ಚಲಕೊಚ್ಚೆನಲ್ಲಿ ನಿನ್ನನ್ನು ಹೂತುಬಿಡುವೆನು, ಎಂದು ಗದ್ದರಿಸಿದನು.

ರಂಗರಾಜ—ಅಯ್ಯಾ! ಕೋಪಮಾಡಬೇಡ. ಶಾಂತನಾಗು.

ಯುವಕ—ನನ್ನ ಗೋಜಿಗೆ ಬರಬೇಡ, ನಡೆ. ನನ್ನ ಕೋಪ ನನಗೆ, ನಿನ್ನ ಕೆಲಸ ನಿನಗೆ.

ರಂಗ—ಅಯ್ಯಾ ! ನನ್ನ ಗುರುತು ನಿನಗೆ ಇನ್ನೂ ಆಗಲಿಲ್ಲವೇ ?

ಯುವಕ—ನಿನ್ನ ಗುರುತೋ ಗಿರತೋ ನನಗೊಂದೂಬೇಡ, ನಡೆ. ಹೆಚ್ಚಾಗಿ ಮಾತನಾಡಿದರೆ ಸರಿಯಾಗಿ ಬುದ್ಧಿಗಲಿಸುವೆನು, ಎಚ್ಚರಿಕೆ !

ರಂಗ—ಹಾಗೆಯೇ ?

ಯುವಕ—ಹಾಗಲ್ಲದೆ ಮತ್ತೇನು ?

ರಂಗ—ದುಡುಕಬೇಡ. ನನ್ನ ಮುಖನೋಡಿ ಮಾತನಾಡು. ಸ್ವಲ್ಪ ಶಾಂತನಾಗು.

ಯುವಕ—(ದುರದುರನೆ ನೋಡಿ) ನೀನಾರೋ ನನಗೆ ಗುರುತಿಲ್ಲ. ಹಿಂದೆ ಎಂದೂ ನಿನ್ನನ್ನು ನಾನು ನೋಡಿದ ಹಾಗಿಲ್ಲ.

ರಂಗ—ನೋಡಿದ ಹಾಗಿಲ್ಲವೇ ! ಚೆನ್ನಾಗಿಯೂ ಜ್ಞಾಪಿಸಿಕೊಳ್ಳು.

ಯುವಕ—ನಾನು ನಿನ್ನನ್ನು ಎಂದಿಗೂ ನೋಡಿಲ್ಲ. ವ್ಯರ್ಥವಾಗಿ ನನ್ನನ್ನು ಏಕೆ ತೊಂದರೆ ಪಡಿಸುವೆ ?

ರಂಗ—(ಹೊಹೋ ಎಂದು ನಗುತ್ತಾ) ಇಷ್ಟರಲ್ಲಿಯೇ ಗೊತ್ತಾಗುವುದು.

ಯುವಕ—ಗೊತ್ತಾಗುವುದೇನು ? ಇಂತಹ ಬೆದರಿಕೆಯಿಂದ ನಾನು ಹೆದರತಕ್ಕವನಲ್ಲ. ಒಳ್ಳೆಯ ಮಾತಿನಿಂದ ಬಂದ ಹಾಗೆ ಹೊರಟು ಹೋಗು ಇಲ್ಲವಾದರೆ—

ರಂಗ—ಶರತ್ಕುಮಾರ ! ಇಲ್ಲವಾದರೆ ನೀನು ಮಾಡುವುದೇನು ? ಇಷ್ಟು ಬೇಗನೆ ನೀನು ನನ್ನನ್ನು ಮರೆಯುವೆ ಯೆಂದು ನಾನು ತಿಳಿದಿರಲಿಲ್ಲ.

——— ೧ ———

# ಹತ್ತನೆಯ ಅಧ್ಯಾಯ.

**ಕಥೋಪಸಂಹಾರ.**

ಶರತ್ಕುಮಾರನೆಂಬ ಹೆಸರು ಕಿವಿಗೆ ಬಿದ್ದೊಡನೆಯೇ ಆ ಯುವಕನು ಚಮತ್ಕೃತನಾಗಿ—ನನ್ನ ಹೆಸರು ನಿನಗೆ ಹೇಗೆ ಗೊತ್ತು ? ಎಂದನು.

ರಂಗ—ನನಗೆ ಹೇಗೋ ಗೊತ್ತಾಯಿತು.

ಯುವಕ—ಅದು ಹೇಗಾದರೂ ಇರಲಿ. ನೀನಾರು ?

ರಂಗ—ನಾನಾರೆಂಬುದನ್ನು ನಿನಗೆ ತಿಳಿಸಲಾರೆನು. ನೀನು ನನ್ನನ್ನು ಗುರುತಿಸಲಾರದೇ ಹೋದರೆ, ನಿನ್ನನ್ನು ನಡುಗಿಸಿ ಬಿಡುವೆನು, ಕಂಡೆಯಾ ?

ಯುವಕ—ನಿನ್ನಲ್ಲಿ ಅಷ್ಟು ಶಕ್ತಿಯಿರುವುದೇ ?

ರಂಗೆ—ಇರುವುದು.

ಯುವಕ—ಹಾಗಾದರೆ ಕೈಗಳಿಗೆ ಕೈಗಳನ್ನು ಸೇರಿಸಿ ಶಕ್ತಿಯನ್ನು ಪರೀಕ್ಷಿಸಿ ನೋಡೋಣವೇ ?

ರಂಗೆ—ಈ ಬಗೆಯ ಪರೀಕ್ಷೆಯು ಚೆನ್ನಾಗಿರುವುದಿಲ್ಲ. ಕೈಗೂ ಬಾಯಿಗೂ ಜಗಳವನ್ನು ಏರ್ಪಡಿಸಿದರೆ, ಆಗ ಶಕ್ತಿಯು ಚೆನ್ನಾಗಿ ಗೊತ್ತಾದೀತು. ಈಗ ನನ್ನಲ್ಲಿ ಎಂಟೇ ಆಣೆಯಿರುವುದು. ನಾವಿಬ್ಬರೂ ಹೋಗಿ ಜಗಳಕ್ಕೆ ಕುಳಿತುಕೊಳ್ಳುವ. ಆಗಲಾದರೂ ನಾನಾರೆಂಬುದನ್ನು ನಿನಗೆ ಗೊತ್ತಾಗದೇ ಇರದು.

ಯುವಕ—ನಿನ್ನ ಮಾತೊಂದೂ ನನಗೆ ಅರ್ಥವಾಗಲೇ ಇಲ್ಲ.

ರಂಗೆ—ಇಷ್ಟರಲ್ಲಿಯೇ ಆದೀತು.

ಯುವಕ—ಹೇಗಾಗುವುದು ?

ರಂಗೆ—ಹೇಗೋ ಆಗುವುದು.

ಯುವಕ—ಬಿಡಿಸಿ ಹೇಳಿದಲ್ಲದೆ ನನಗೆ ಗೊತ್ತಾಗದು.

ರಂಗೆ—(ಅರ್ಧರೂಪಾಯಿಯನ್ನು ತೋರಿಸಿ) ಇದೇ ನಮ್ಮಿಬ್ಬರಿಗೂ ಪರಿಚಯವನ್ನುಂಟುಮಾಡುವುದು.

ಯುವಕನು ಬಲು ಹೊತ್ತು ಚಿಂತಿಸಿದವನಾಗಿ ಕಟ್ಟಕಡೆಗೆ ಆಗಂತುಕನನ್ನು ಕುರಿತು—ನನ್ನ ಬಾಲ್ಯದಲ್ಲಿ ರಂಗರಾಜನೆಂಬ ಸ್ನೇಹಿತನೊಬ್ಬನಿದ್ದನು. ಈಗ ನಿನ್ನನ್ನು ನೋಡಿದರೆ, ಆತನ ಸ್ಮರಣೆಯು ನನಗುಂಟಾಗುತ್ತಿರುವುದು, ಎಂದು ನುಡಿದನು.

ರಂಗೆ—ನಾನೇ ಆ ರಂಗರಾಜನು.

ಯುವಕ—ಇದು ನಿಜವೇ ?

ರಂಗೆ—ಶರತ್ಕುಮಾರ ! ಮಲಗುವುದಕ್ಕೆ ಸ್ಥಲವಿಲ್ಲದೆ ರಾತ್ರಿಯಲ್ಲಿ ಕಾರಾಗೃಹದಲ್ಲಿ ಮಲಗಿದ್ದುದೂ, ನಾಟಕದಲ್ಲಿ ಸ್ತ್ರೀಸಿಕರ ವೇಷವನ್ನು ತಾಳಿ ಅಭಿನಯಿಸಿದುದೂ, ನೀರಿನಲ್ಲಿ ಬಿದ್ದ ನೌಕಾಧಿಪತಿಯನ್ನು ಬದುಕಿಸಿದುದೂ, ನೀನು ಹಡಗಿನಲ್ಲಿ ಕುಳಿತು ಹೊರಟುಹೋಗುವಾಗ ನಿನ್ನಲ್ಲಿದ್ದ ಎಂಟಾಣೆಗಳನ್ನು ನನಗೆ ಕೊಟ್ಟದೂ ನಿಜವಾಗಿರುವುದಾದರೆ, ನಾನು ರಂಗರಾಜನಾಗಿರುವುದೂ ನಿಜವು.

ಯುವಕನು ಈ ಮಾತನ್ನು ಕೇಳಿದ ಕೂಡಲೆ, ತನ್ನ ಪೂರ್ವವೃತ್ತಾಂತವೆಲ್ಲವನ್ನೂ ಜ್ಞಾಪಕಕ್ಕೆ ತಂದುಕೊಂಡು, ಬಹುಕಾಲಕ್ಕೆ ಮಿತ್ರನ ದರ್ಶನವಾದುದಕ್ಕಾಗಿ ರಂಗರಾಜನನ್ನು ಬಲವಾಗಿ ತಬ್ಬಿಕೊಂಡು ಗಳಗಳನೆ ಅತ್ತುಬಿಟ್ಟನು. ರಂಗರಾಜನ ಮನವೂ ಕರಗಿ ಕರಗಿ ನೀರಾಗಿ ಹರಿಯಿತು. ಮಿತ್ರರಿಬ್ಬರೂ ಕ್ಷಣಕಾಲ ತಮ್ಮತಮ್ಮ ಸಂತೋಷ ಬಾಷ್ಪಗಳನ್ನು ಸುರಿಸಿದ ಬಳಿಕ ರಂಗರಾಜನು ಶರತ್ಕುಮಾರನನ್ನು ಕುರಿತು—ಶರತ್ ! ಬಹುಕಾಲದಿಂದಲೂ ನಿನ್ನ ಸುದ್ದಿಯೇ ನನಗೆ ತಿಳಿಯಲಿಲ್ಲ. ಈಗ ನಿನ್ನ ವೃತ್ತಾಂತವೇನು ? ಎಂದು ಕೇಳಿದನು. ಅದಕ್ಕೆ ಶರತ್ಕುಮಾರನು ಉತ್ತರವಿತ್ತುದು—

" ಮಿತ್ರಮುಹಾಶಯ ! ನನ್ನ ಜೀವನ ಚರಿತ್ರವು ಅತಿ ಶೋಚನೀಯವಾದುದು. ಲೋಕದಲ್ಲಿ ಅದೃಷ್ಟವಂತರು ಮೇಲಮೇಲಕ್ಕೆ ಹತ್ತುವರು, ಇದಕ್ಕೆ ನೀನೇ ನಿದರ್ಶನವೆಂದು ತೋರುತ್ತಿರುವುದು. ನನ್ನಂತಹ ಅದೃಷ್ಟಹೀನರು ದಿನದಿನಕ್ಕೆ ಅಧೋಗತಿಯನ್ನು ಅಡರುವರು. ಇದಕ್ಕೆ ಆವ ಕಾರಣವನ್ನು ಕಲ್ಪಿಸುವುದಕ್ಕಾದೀತು ? ರಂಗರಾಜ ! ನೀನಾದರೂ ಒಳ್ಳೆಯ ಸ್ಥಿತಿಯಲ್ಲಿ ಇರುವೆಯಲ್ಲಾ! ಇದೇ ನನಗೆ ಕನಕಾಭಿಷೇಕವು. ದೇವರು ನಿನಗೆ ಉತ್ತರೋತ್ತರಾಭಿವೃದ್ಧಿಯನ್ನುಂಟುಮಾಡಲಿ. ನನ್ನ ಹಣೆಯಲ್ಲಿ ಬರೆದುದನ್ನು ತಪ್ಪಿಸಬಲ್ಲವರಾರು ? ನಾನು ಹೇಗೋ ಮಾನದಿಂದ ಈ ಜನ್ಮವನ್ನು ನೀಗಿಕೊಳ್ಳುವೆನು."

ರಂಗ—ಶರತ್ಕುಮಾರ ! ನೀನು ಹೀಗೆ ಸಂಕಟಪಡಬೇಕಾದುದಿಲ್ಲ. ನಿನಗೂ ಇನ್ನು ಮೇಲೆ ಉತ್ತರೋತ್ತರಾಭಿವೃದ್ಧಿಯುಂಟಾಗುವುದು. ನಡೆ, ನಾವಿಬ್ಬರೂ ಬೇರೆಬೇರೆಯಾಗುವ ದಿವಸ ಆವ ಫಲಾಹಾರ ಮಂದಿರದಲ್ಲಿ ಒಟ್ಟಿಗ ಕುಳಿತುಕೊಂಡು ಫಲಾಹಾರವನ್ನುಸೇವಿಸಿದೆವೋ, ಈಗಲೂ ಅಲ್ಲಿಗೇ ಹೋಗಿ ಪೂರ್ವದ ಸ್ಥಿತಿಯನ್ನು ಜ್ಞಾಪಿಸಿಕೊಳ್ಳುತ್ತಾ ಆನಂದಿಸುವ.

ಶರತ್—ಆಗಬಹುದು.

ರಂಗ—ಆಗಬಹುದೇ ?

ಶರತ್—ಆಗಬಹುದು. ಆ ಫಲಾಹಾರಮಂದಿರವು ಇನ್ನೂ ನಡೆದು ಬರುತ್ತಿರುವುದು. ನೆನ್ನೆತಾನೆ ನಾನು ಅಲ್ಲಿಗೆ ಹೋಗಿದ್ದೆನು.

ರಂಗ—ಹಾಗೆಯೇ ! ಆ ಸಮಯದಲ್ಲಿ ನನ್ನನ್ನು ಜ್ಞಾಪಿಸಿಕೊಂಡೆಯಾ ?

ಶರತ್—ನಿಜವಾಗಿಯೂ ಜ್ಞಾಪಿಸಿಕೊಂಡೆನು, ರಂಗರಾಜ ! ಅದಕ್ಕೆ ತಕ್ಕ ಹಾಗೆ ಈಗ ನಿನ್ನ ದರ್ಶನವೂ ಆಯಿತು. ಅದೃಷ್ಟವು ಅನುಕೂಲಿಸುವುದಾದರೆ, ಹೀಗೆಲ್ಲಾ ಶುಭಪರಂಪರೆಯುಂಟಾಗುವುದು. ಮಿತ್ರಮಹಾಶಯ ! ನಿನ್ನನ್ನು ನೋಡಿದ ಇಂದಿನ ದಿನವೇ ಸುದಿನವು.

ರಂಗೆ—ನಾನೂ ಹಾಗೆಯೇ ತಿಳಿದಿರುವೆನು.

ಈ ಸಂತೋಷದ ಮಾತುಗಳನ್ನು ಆಡುತ್ತಾ ಮಿತ್ರರಿಬ್ಬರೂ ಫಲಾಹಾರ ಮಂದಿರಕ್ಕೆ ಹೋಗಿ, ಹೊಟ್ಟೆತುಂಬಾ ಭುಂಜಿಸಿ ಹೊರಗೆ ಬಂದಕೂಡಲೆ ರಂಗರಾಜನು ಶರತ್ಕುಮಾರನನ್ನು ಬಟ್ಟೆಯ ಅಂಗಡಿಗೆ ಕರೆದುಕೊಂಡು ಹೋಗಿ, ಆತನಿಗೆ ರಾಜಯೋಗ್ಯವಾದ ಉಡುಗೆ ತೊಡುಗೆಗಳನ್ನು ಕೊಂಡು ಕೊಟ್ಟನು. ಬಳಿಕ ರಂಗರಾಜನು ಶರತ್ಕುಮಾರನನ್ನು ತಾನಿಳಿದಿದ್ದ ಸ್ಥಳಕ್ಕೆ ಕರೆದುಕೊಂಡು ಹೋಗಿ, ಶ್ಲಾಘ್ಯವಾದ ಭೋಜನೋಪಚಾರಗಳಿಂದ ಸತ್ಕರಿಸಿದನು. ಇದೇ ರೀತಿಯಲ್ಲಿ ಸ್ನೇಹಿತರಿಬ್ಬರೂ ಕೆಲವು ದಿನಗಳು ಸುಖದಿಂದಿರುತ್ತಿದ್ದರು.

ಒಂದು ದಿನ ರಮಾರಮಣನು ಬಂದು ವಿದ್ಯಾನಗರಕ್ಕೆ ತೆರಳುವ ಮುಹೂರ್ತವು ಆಸನ್ನವಾಗಿರುವುದೆಂದು ತಿಳಿಸಿ ಹೊರಟುಹೋದನು. ರಂಗರಾಜನು ಸುಮುಹೂರ್ತದಲ್ಲಿ ಶರತ್ಕುಮಾರನನ್ನು ಜತೆಯಲ್ಲಿ ಕರೆದುಕೊಂಡು ಅಮರಾವತಿಯ ಮೂಲಕವಾಗಿ ವಿದ್ಯಾನಗರಕ್ಕೆ ತೆರಳಿದನು. ಅಮರಾವತಿಯಲ್ಲಿ ವಿಲಾಸಿನಿಯನ್ನು ಕಂಡುಕೊಂಡು ತನ್ನ ವೃತ್ತಾಂತವೆಲ್ಲವನ್ನೂ ಆಕೆಗೆ ತಿಳಿಸಿ ಹೋಗಬೇಕೆಂಬುದೇ ಅವನ ಮುಖ್ಯೋದ್ದೇಶವಾಗಿದ್ದಿತು.

ರಂಗರಾಜನು ಅಮರಾವತಿಯಲ್ಲಿ ಒಂದು ದೊಡ್ಡ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಅದರಲ್ಲಿ ತನ್ನ ಮಿತ್ರನೊಡನೆ ಇಳಿದುಕೊಂಡನು. ಒಂದೆರಡು ದಿನಗಳ ವರೆಗೂ ಆ ನಗರದ ಸೌಂದರ್ಯವನ್ನು ನೋಡಿ ಆನಂದಿಸಿದ ಬಳಿಕ, ರಂಗರಾಜನು ಚಿತ್ರಶಾಲೆಯೊಂದಕ್ಕೆ ಹೋಗಿ, ಅಲ್ಲಿ ಸುಂದರವಾದ ಅನೇಕ ಚಿತ್ರಪಟಗಳನ್ನು ಚಿತ್ರಗಾರರು ಹೇಳಿದ ಬೆಲೆಗೆ ಕೊಂಡುಕೊಂಡು ಮನೆಗೆ ಬಂದನು. ರಂಗರಾಜನಿಗೆ ಪಟಗಳನ್ನು ಕೊಳ್ಳುವುದರಲ್ಲಿ ಅಷ್ಟು ಆಸಕ್ತಿಯಿಲ್ಲದಿದ್ದರೂ, ಅಂದವಾಗಿ ಚಿತ್ರದ ಕೆಲಸವನ್ನು ಮಾಡುತ್ತಿದ್ದ ಬಡಬಗ್ಗರಾದ ಹೆಂಗುಸರಿಗೆ ಉಪಕಾರವಾಗಲೆಂದು ಆತನು ಬೇಕಾದ ಹಾಗೆ ಹಣವನ್ನು ವೆಚ್ಚಮಾಡಿದನು. ಇವನ ಔದಾರ್ಯವು ಸ್ತ್ರೀಪ್ರಪಂಚದ

ಎಲ್ಲೆಡೆಗಳಲ್ಲಿಯೂ ಹರಡಿತು. ಹೀಗಿರಲೊಂದು ದಿನ ರಂಗರಾಜನಿಗೆ ಒಂದು ಕಾಗದವು ಬಂದಿತು. ಅದರ ಒಕ್ಕಣೆಯೇನೆಂದರೆ—

" ಉದಾರಮಹಾಶಯ ! ತಾವು ರಾಜನಗರದಿಂದ ಬಂದು ಅನೇಕ ಚಿತ್ರಪಟಗಳನ್ನು ಬೆಲೆಗೆ ಕೊಂಡಿರುವುದಾಗಿ ಕೇಳಿ, ನಾನು ತಮಗೆ ಈ ಕಾಗದವನ್ನು ಬರೆಯಲು ಧೈರ್ಯವನ್ನು ತಾಳಿದೆನು. ರಾಜನಗರದ ಯುವತಿಯಾದ ನಾನು ಗತ್ಯಂತರಾಭಾವದಿಂದ ಚಿತ್ರಪಟಗಳನ್ನು ಬರೆದು ಜೀವಿಸುತ್ತಿರುವೆನು. ನನಗೆ ಈಗ ಹಣದ ಆವಶ್ಯಕತೆಯು ಅಧಿಕವಾಗಿರುವುದರಿಂದ ನನ್ನಲ್ಲಿರುವ ಪಟಗಳನ್ನು ಅತ್ಯಲ್ಪಬೆಲೆಗೆ ಮಾರಿಬಿಡಬೇಕೆಂದಿರುವೆನು. ತಾವು ಇಷ್ಟಪಡುವುದಾದರೆ ನಾನು ಪಟಗಳನ್ನು ತಮ್ಮಲ್ಲಿಗೆ ಒಯ್ಯುವೆನು. ಕೂಡಲೆ ಉತ್ತರವನ್ನು ಬಯಸುವ—

" ತಮ್ಮ ಮಂಗಳಾಕಾಂಕ್ಷಿಣಿ "
ಕಖಗಘಜ.
" ಆನಂದವನವಾಟಿಕಾ."

ರಂಗರಾಜನು ಪತ್ರವನ್ನೋದಿಹೆಂಗುಸಿನ ಕಷ್ಟದಶೆಗಾಗಿ ಸಂಕಟಪಟ್ಟವನಾಗಿ, " ಚಿತ್ರಗಳೊಡನೆ ಸಂಧ್ಯಾಕಾಲದ ಹೊತ್ತಿಗೆ ಬರಬಹುದು, " ಎಂದು ಆಕೆಗೆ ಪ್ರತ್ಯುತ್ತರವನ್ನು ಬರೆದು ಕಳುಹಿಸಿದನು. ಸಂಧ್ಯಾಕಾಲದ ಹೊತ್ತಿಗೆ ಸರಿಯಾಗಿ ಅವಗುಂಠನವತಿಯಾದ ಯುವತಿಯೊಬ್ಬಳು ಚಿತ್ರಪಟಗಳನ್ನು ತೆಗೆದುಕೊಂಡು ರಂಗರಾಜನಿದ್ದಲ್ಲಿಗೆ ಬಂದು ಪಟಗಳನ್ನು ಒಂದೊಂದಾಗಿ ಪ್ರದರ್ಶನಮಾಡಿದಳು. ರಂಗರಾಜನು ಪಟಗಳನ್ನು ನೋಡುವುದಕ್ಕೆ ಆ ಕೋಣೆಗೆ ಬಂದಕೂಡಲೆ, ಆ ಯುವತಿಯು ಬೆಚ್ಚಿ ಬೆದರಿ ದೂರ ಸರಿದು ನಿಂತಳು. ರಂಗರಾಜನು ಯುವತಿಯ ಈ ಭಾವವನ್ನು ನೋಡಿ, ತನ್ನ ಮನದಲ್ಲಿ ಬಗೆಬಗೆಯಾಗಿ ಚಿಂತಿಸಿದ ಬಳಿಕ ಯುವತಿಯನ್ನು ಕುರಿತು—ಮಂಗಳಾಂಗಿ ! ನಿನ್ನ ಚಿತ್ರಪಟಗಳೆಲ್ಲವೂ ಸುಂದರವಾಗಿರುವುವು. ನಾನು ಇವೆಲ್ಲವನ್ನೂ ಕೊಂಡುಕೊಳ್ಳುವೆನು, ಎಂದನು.

ಯುವತಿ—ಸ್ವಾಮಿ ! ಬೆಲೆಯೇ ಇನ್ನೂ ನಿರ್ಣಯಿಸಲ್ಪಟ್ಟಿಲ್ಲ—ಎಂದ ಮೇಲೆ, ತಾವು ಕೊಳ್ಳುವುದು ಹೇಗೆ ?

ರಂಗರಾಜನು ಈಕೆಯಾಡಿದ ಮಾತನ್ನು ಕೇಳಿದನು. ಈಕೆಯ ಧ್ವನಿಯು ಆತನಿಗೆ ಪೂರ್ವಪರಿಚಿತವಾಗಿದ್ದ ಹಾಗೆ ತೋರಿಬರಲು, ರಂಗರಾಜನು ಚಮ

ತ್ಕೃತನಾಗಿ—ನೀನು ಕೇಳಿದಷ್ಟು ಕೊಡುವುದಕ್ಕೆ ನಾನು ಸಿದ್ಧನಾಗಿರುವಾಗ, ಬೆಲೆಯ ವಿಚಾರವೇಕೆ? ನಾನು ಕೊಡಬೇಕಾದ ಹಣದ ಮೊತ್ತವನ್ನು ತಿಳಿಸಿಬಿಡು. ಇವೇ ಅಲ್ಲದೆ ನಿನ್ನಲ್ಲಿ ಇನ್ನೂ ಚಿತ್ರಪಟಗಳು ಇರುವುದಾದರೆ ಅವನ್ನೂ ಕೊಳ್ಳುವೆನು, ಎಂದು ಗದ್ಗದ ಸ್ವರದಿಂದ ನುಡಿದನು.

ಯುವತಿ—ಮಹಾತ್ಮಾ! ತಮ್ಮ ದಯಾರ್ದ್ರ ಹೃದಯತೆಗಾಗಿಯೂ ಪರದುಃಖದುಃಖಿತತ್ವಕ್ಕಾಗಿಯೂ ನಾನು ತಮಗೆ ಚಿರಕಾಲ ಬಾಧ್ಯಪಟ್ಟಿರುವೆನು.

ಈ ರೀತಿಯಾಗಿ ಯುವತಿಯಾಡಿದ ಮಾತೂ ಮೃದುಮಧುರವಾದ ಧ್ವನಿಯೂ ರಂಗರಾಜನ ಹೃದಯವನ್ನು ಒಳಹೊಕ್ಕು ಅಂಗಾಂಗಗಳೆಲ್ಲವನ್ನೂ ನಡುಗಿಸಿಬಿಟ್ಟಿತು. ರಂಗರಾಜನು ಸಾತ್ತ್ವಿಕಭಾವದಿಂದ ಅಧೀರನಾಗಿ, ಕೊಂಚ ಹೊತ್ತು ಮೌನದಿಂದ ಇದ್ದ ಬಳಿಕ—ಎಲೌ ಕೋಮಲಾಂಗಿ! ನಿನ್ನ ಈ ಧ್ವನಿಯು ಅನೇಕವೇಳೆ ನನ್ನ ಕರ್ಣಗೋಚರವಾಗಿರುವಂತೆ ಬೋಧವಾಗುತ್ತಿರುವುದು. ನಿನ್ನನ್ನು ನಾನು ಎಲ್ಲಿ ನೋಡಿರಬೇಕು? ನಿನಗೆ ಜ್ಞಾಪಕದಲ್ಲಿರುವುದಾದರೆ ತಿಳಿಸಲು ಅಡ್ಡಿಯೇನೂ ಇರುವುದಿಲ್ಲ, ಎಂದು ಹೇಳಿದನು.

ಯುವತಿ—ತಾವು ಹೀಗೆ ಕೇಳಲು ಕಾರಣವೇನೋ ನನಗೊಂದೂ ತಿಳಿಯದು.

ರಂಗರಾಜ—ನಿನ್ನಧ್ವನಿಯು ನನ್ನನ್ನು ಮರುಳುಮಾಡುತ್ತಿರುವುದು.

ಯುವತಿ—ಹಾಗೆಯೇ?

ರಂಗ—ಈ ಧ್ವನಿಯನ್ನು ನಾನು ಹಿಂದೆ ಮರೆತವನೂ ಅಲ್ಲ, ಮುಂದೆ ಮರೆಯುವ ಹಾಗೂ ಇಲ್ಲ.

ಯುವತಿ—ಇದು ಅಚ್ಚರಿಯ ಸುದ್ದಿಯೇ ಸರಿ.

ರಂಗ—ನಾರೀಮಣಿ! ನಾನು ನಿಜವಾಗಿಯೂ ನಿನ್ನನ್ನು ಹಿಂದೆ ಎಲ್ಲಿಯೋ ನೋಡಿರಬೇಕು. ಇದೆಂದಿಗೂ ಸುಳ್ಳಾಗಲಿಕ್ಕಿಲ್ಲ.

ಯುವತಿ—ಇದು ಸಾಧ್ಯವೇ?

ರಂಗ—ಸಾಧ್ಯವಲ್ಲದೇ ಏನು? ನೀನು ನನಗೆ ಗುರುತು ಕಂಡವಳೇ ಆಗಿರಬೇಕು. ಇದರಲ್ಲಿ ಏನೇನೂ ಸಂಶಯವಿಲ್ಲ.

ಯುವತಿ—ತಮ್ಮ ಮಾತಿನಿಂದ ನನಗೆ ಭಯವಾಗುತ್ತಿರುವುದು.

ರಂಗ—ವಿಶೇಷಕಾರಣವೇನೂ ಇಲ್ಲದಿರುವುದಾದರೆ, ನೀನು ನಿನ್ನ

ಅವಗುಂಠನವನ್ನು ಕೊಂಚ ಹೊತ್ತು ಓರೆಮಾಡು. ನಾನು ನನ್ನ ಸಂಶಯ ವನ್ನು ಹೋಗಲಾಡಿಸಿಕೊಳ್ಳುವೆನು.

ಯುವತಿಯು ತನ್ನ ಅವಗುಂಠನವನ್ನು ತಟ್ಟನೆ ಓರೆಮಾಡಿದಳು. ಸರ್ವಾಂಗಸುಂದರಿಯಾದ ವಿಲಾಸಿನಿಯು ತನ್ನ ದೇದೀಪ್ಯಮಾನವಾದ ನವಯೌವನದ ಸಾಂರಾಜ್ಯದಲ್ಲಿ ಪಟ್ಟಾಭಿಷೇಕಗೊಂಡ ದೇವತಾಮೂರ್ತಿಯೋ ಎಂಬಂತೆ ರಂಗರಾಜನ ಇದಿರಿನಲ್ಲಿ ಕಾಣಿಸಿಕೊಂಡಳು. ರಂಗರಾಜನು ದಿಗ್ಭ್ರಾಂತನಾಗಿ ಎವೆಯಿಕ್ಕದೆ ಆ ದಿವ್ಯಮೂರ್ತಿಯನ್ನು ನಯನ ಕುಸುಮಗಳಿಂದ ಮೌನವಾಗಿ ಆರಾಧಿಸಿ ತೃಪ್ತಿಗೊಳ್ಳದೆ—ವಿಲಾಸ ! ಎಂದು ನುಡಿದು ಕಣ್ಣುಗಳಲ್ಲಿ ನೀರ ತಂದುಕೊಂಡನು.

ಯುವತಿ—ಅಹುದು, ಮಹಾಶಯ ! ನಾನೇ ಆ ವಿಲಾಸಿನಿಯು.

ರಂಗ—ವಿಲಾಸಿನಿ ! ದೈವದ ವಿಚಿತ್ರಗತಿಯನ್ನು ಬಲ್ಲವರಾರು ? ಮೊದಲನೆಯ ಸಲ ನಾನು ನಂದನ ಗ್ರಾಮದ ಬೀದಿಯಲ್ಲಿ ಬಿಕಾರಿಯಂತೆ ಜ್ಞಾನತಪ್ಪಿ ಬಿದ್ದಿರುವಾಗ ನೀನು ನನಗೆ ಪ್ರಾಣದಾನ ಮಾಡಿದೆ; ಎರಡನೆಯ ಸಲ ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಕ್ಕಾಗಿ ಹಡಗಿನಿಂದ ನೀರಿನೊಳಗೆ ದುಮ್ಮಿಕ್ಕುವುದರಲ್ಲಿದ್ದೆನು. ಆಗಲೂ ನೀನು ನನ್ನನ್ನು ಉದ್ಧಾರಮಾಡಿದೆ. ನಿನ್ನ ಪರೋಪಕಾರ ಬುದ್ಧಿಯನ್ನು ನಾನು ಎಷ್ಟೆಂದು ಕೊಂಡಾಡಲಿ !

ವಿಲಾಸಿನಿ—ತಾವೂ ನನ್ನನ್ನು ದುರ್ದಾಂತನಾದ ದುಷ್ಟನ ಹಾವಳಿಯಿಂದ ಉದ್ಧರಿಸೋಣವಾಯಿತು. ದೈವವು ನಮ್ಮ ವಿಷಯದಲ್ಲಿ ಹೀಗೇಕೆ ವರ್ತಿಸುತ್ತಿರುವುದೋ ಬಲ್ಲವರಾರು ?

ರಂಗ—ವಿಲಾಸ! ಈ ಪಟಗಳನ್ನು ನೀನು ವಿನೋದಕ್ಕಾಗಿ ಮಾರುವೆಯಾ; ಇಲ್ಲವೆ ನಿನಗೆ ನಿಜವಾಗಿಯೂ ಕಷ್ಟಕಾಲವು ಒದಗಿಬಂದಿರುವುದೇ?

ವಿಲಾಸಿನಿ—ತಮ್ಮ ಮುಂದೆ ಗುಟ್ಟೇನು ! ನಾನು ತಮ್ಮನ್ನು ಮೊದಲು ನೋಡಿದಾಗ, ಲಕ್ಷಾಧಿಪತಿಯ ಮಗಳಾಗಿದ್ದೆನು. ಈಗ ಚಿತ್ರವೃತ್ತಿಯಿಂದ ಜೀವಿಸಿಕೊಂಡಿರಬೇಕಾದ ಕಾಲವು ಬಂದಿರುವುದು.

ರಂಗ—ಇದನ್ನು ಕೇಳಿ ನನಗೆ ತುಂಬಾ ಆಶ್ಚರ್ಯವಾಗುತ್ತಿರುವುದು.

ವಿಲಾಸಿನಿ—ಆಶ್ಚರ್ಯವೇ ?

ರಂಗ—ಅಹುದು, ಆಶ್ಚರ್ಯವು.

ವಿಲಾಸಿನಿ—ಕಾರಣವೇನು ?

ರಂಗ—ಈ ನಗರದ ಕೋಟೀಶ್ವರನನ್ನು ನೀನು ವರಿಸುವುದಾಗಿ ಪತ್ರಿಕೆಯಲ್ಲಿ ಬರೆದಿದ್ದುದನ್ನು ನಾನು ಓದಿದ ಜ್ಞಾಪಕವಿರುವುದು.

ವಿಲಾಸಿನಿ—ಅದೆಲ್ಲವೂ ಸುಳ್ಳಿನ ಸುದ್ದಿಯು.

ರಂಗ—(ಸಂಭ್ರಮಗೊಂಡು) ಏನು, ಸುಳ್ಳೇ ?

ವಿಲಾಸಿನಿ—ಮೊದಲಿನಿಂದ ಕೊನೆಯ ವರೆಗೂ ಸುಳ್ಳು. ಆವನೋ ಒಬ್ಬನು ನನ್ನನ್ನು ಮೋಸಪಡಿಸುವುದಕ್ಕಾಗಿ ಹೂಡಿಧ ಹೂಟವು.

ರಂಗ—ಹಾಗಾದರೆ ನೀನು ಆತನನ್ನು ಮದುವೆಯಾಗಲಿಲ್ಲವೇ ?

ವಿಲಾಸಿನಿ—ನಾನು ಅಜ್ಞಾತಕುಲಗೋತ್ರರಾದ ವಿದೇಶದವರನ್ನು ನಂಬಲಾರೆನು. ನನಗೆ ಮದುವೆಯಾಗದಿದ್ದರೂ ಚಿಂತೆಯಿಲ್ಲ. ಪರದೇಶಿಯನ್ನು ಮಟ್ಟಿಗೆ ಎಂದಿಗೂ ಕೂಡೆನು.

ರಂಗ—(ನಿಟ್ಟುಸಿರನ್ನು ಬಿಡುತ್ತಾ) ವಿಲಾಸ ! ಈ ಮಾತನ್ನು ಕೇಳಿ ನನಗೆ ತುಂಬಾ ವ್ಯಸನವಾಗುವುದು.

ವಿಲಾಸಿನಿ—ವ್ಯಸನಕ್ಕೆ ಕಾರಣವೇನು, ಮಹಾಶಯ ?

ರಂಗ—ವಿಲಾಸ, ಕೇಳು. ನಾನು ಮೊದಲಿನಿಂದಲೂ ನಿನ್ನನ್ನೇ ಪ್ರೀತಿಸುತ್ತಿದ್ದೆನು. ಆದರೆ ಮಾಡುವುದೇನು ? ನಾನೂ ಪರದೇಶದವನೇ ಆಗಿರುವೆನು.

ವಿಲಾಸಿನಿ—(ಕಣ್ಣಿನಿಂದ ವಿಲಾಸವನ್ನು ಬೀರುತ್ತಾ) ನೀನೆಂದಿಗೂ ಪರದೇಶಿಯಲ್ಲ. ನನ್ನನ್ನು ಪರೀಕ್ಷಿಸುವುದಕ್ಕಾಗಿಯೇ ನೀನು ಹೀಗೆ ಮಾತನಾಡುವೆ. ನಿನ್ನ ನಡೆನುಡಿಗಳಿಂದ ನೀನಾರೆಂದು ನನಗೆ ತಿಳಿಯದೇ !

ರಂಗ—ವಿಲಾಸ ! ನನ್ನ ಚರಿತ್ರೆಯನ್ನು ಕೊಂಚವಾಗಿ ತಿಳಿಸಲೇ ? ಮೊದಲು ನಾನು ಬೀದಿಯ ಬಿಕಾರಿ, ಬಳಿಕ ಆತ್ಮಹತ್ಯಾಪರಾಯಣ. ನೀನು ಆದರದಿಂದ ಕೇಳುವುದಾದರೆ, ನನ್ನ ಮುಂದಣ ಚರಿತ್ರೆಯನ್ನೂ ಹೇಳಿಬಿಡುವೆನು.

ವಿಲಾಸಿನಿ—ತಾವು ತಿಳಿಸೋಣವಾಗಲಿ. ನಾನು ಆದರದಿಂದಲೇ ಅದೆಲ್ಲವನ್ನೂ ಕೇಳುವೆನು. ತಾವು ಸಂಕೋಚಪಡಬೇಕಾದುದಿಲ್ಲ.

ರಂಗ—ವಿಲಾಸ! ನನ್ನ ಚರಿತ್ರೆಯು ಆಶ್ಚರ್ಯಕರವಾದುದು.

ವಿಲಾಸಿನಿಯು ರಂಗರಾಜನ ಬಾಯಿಂದ ಏನು ಹೊರಡುವುದೋ ಎಂದು

ಕಿವಿಗೊಟ್ಟುಕೊಂಡು ಕುಳಿತಿರುವಲ್ಲಿ, ರಂಗರಾಜನು ತಾನು ಕೋಟೀಶ್ವರನೆಂದೂ, ವಿದ್ಯಾನಗರದ ಚಕ್ರಾಧಿಪತಿಯೆಂದೂ ಈಗ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗುವುದಕ್ಕಾಗಿ ತೆರಳುತ್ತಿರುವನೆಂದೂ ತಿಳಿಸಿದನು.

ವಿಲಾಸಿನಿ—(ಆನಂದಪರವಶಳಾಗಿ) ಪ್ರಭೂ ! ಹೀಗಿರುವಲ್ಲಿ, ಆತ್ಮಹತ್ಯೆಗಾಗಿ ಯತ್ನಮಾಡಿದುದೇಕೆ ?

ರಂಗ—(ನಸುನಕ್ಕು) ಅದು ಪ್ರೀತಿಯ ದುಷ್ಪರಿಣಾಮ.

ವಿಲಾಸಿನಿ—ತಾವು ಆರನ್ನು ಪ್ರೀತಿಸೋಣವಾಗಿದ್ದಿತು ? ಗುಟ್ಟಲ್ಲದಿದ್ದರೆ ತಿಳಿಸಬಹುದು.

ರಂಗ—ಗುಟ್ಟೇನು ? ನಾನು ಲಕ್ಷಾಧಿಪತಿಯ ಕುವರಿಯನ್ನು ಪ್ರೀತಿಸುತ್ತಿದ್ದೆನು.

ವಿಲಾಸಿನಿ—ಅರ್ಥವಾಗಲಿಲ್ಲ.

ರಂಗರಾಜನು ಉತ್ತರಕೊಟ್ಟುದೇನೆಂದರೆ—

" ವಿಲಾಸಿನಿ ! ಹೇಳುವೆನು, ಕೇಳು. ನಾನು ಹಿಂದೆ ಬೀದಿಯ ಬಿಕಾರಿಯಾಗಿ ಬಿದ್ದಿದ್ದಾಗ, ನನಗೆ ಪ್ರಾಣದಾನ ಮಾಡಿದ ಕನ್ಯೆಯಲ್ಲಿ ಪ್ರಬಲವಾದ ಅನುರಾಗವೇರ್ಪಟ್ಟಿತು. ಈಗ ಆಕೆಯು ಪರದೇಶಿಯನ್ನು ಮದುವೆಯಾಗುವುದಿಲ್ಲವೆಂದು ಮುಷ್ಕರ ಹಿಡಿದಿರುವಳು. "

ವಿಲಾಸಿನಿಯು ಅನುರಾಗಪೂರಿತವಾದ ದೃಷ್ಟಿಯಿಂದ ರಂಗರಾಜನನ್ನು ನೋಡಿ ನಾಚುಗೆಯಿಂದ ತಲೆವಾಗಿ ಕುಳಿತಳು. ಅವಳ ಬಾಯಲ್ಲಿ ಒಂದು ಮಾತೂ ಹೊರಡಲಿಲ್ಲ. ರಂಗರಾಜನು ಎದ್ದು ಹೋಗಿ ಆಕೆಯ ಕೈಗಳನ್ನು ಹಿಡಿದುಕೊಂಡು —ವಿಲಾಸ ! ನಿಜವಾಗಿಯೂ ಹೇಳು. ನಾನು ನಿನ್ನನ್ನು ಪ್ರೀತಿಸುವ ಹಾಗೆ ನೀನೂ ನನ್ನನ್ನು ಪ್ರೀತಿಸುವೆಯಾ ?

ವಿಲಾಸಿನಿ—ಪ್ರಭೂ ! ನಾನು ತಮ್ಮನ್ನು ನೋಡಿದಾಗಿನಿಂದಲೂ ತಮ್ಮಲ್ಲಿ ಅಕ್ರೀತದಾಸಿಯಾಗಿ ಬಿಟ್ಟಿರುವೆನು. ಹೀಗಿರುವಲ್ಲಿ ತಾವು ನನ್ನನ್ನು ಕೇಳಬೇಕಾದುದೇನೂ ಇರುವುದಿಲ್ಲ. ತಮ್ಮ ಅಭಿಪ್ರಾಯಕ್ಕೆ ನಾನು ಪ್ರತಿಯಾಗಿ ನಡೆಯತಕ್ಕವಳೇ ಅಲ್ಲ.

ರಂಗರಾಜ—ವಿಲಾಸಿನಿ ! ಪ್ರೇಮತತ್ತ್ವವನ್ನು ವಿಚಾರಿಸಿ ನೋಡಲಾಗಿ ಲೋಕದಲ್ಲಿ ನಾವಿಬ್ಬರೇ ಧನ್ಯರು. ನಮ್ಮ ಭಾಗಕ್ಕೆ ಭೂಲೋಕವೇ ಸ್ವರ್ಗಖಂಡವು, ನಮ್ಮ ಇಹ ಸಂಸಾರ ಸುಖವೇ ಸ್ವರ್ಗಸುಖವು.

* * * *

ಒಂದೆರಡು ವಾರಗಳೊಳಗಾಗಿ ವಿಲಾಸಿನೀ ರಂಗರಾಜರಿಗೆ ವಿವಾಹ ಮಹೋತ್ಸವವು ಅಮರಾವತಿಯಲ್ಲಿಯೇ ಅತಿವೈಭವದಿಂದ ನಡೆಯಿತು. ಈ ಮಹೋತ್ಸವಕ್ಕೆ ರಂಗರಾಜನು ಅನೇಕ ಬಂಧುಬಾಂಧವರನ್ನು ಕರೆಯಿಸಿ ಕೊಂಡಿದ್ದದು ಮಾತ್ರವೇ ಅಲ್ಲದೆ, ಶರತ್ಕುಮಾರನ ವೃದ್ಧಮಾತಾಪಿತೃ ಗಳನ್ನೂ ಬರಮಾಡಿಕೊಂಡಿದ್ದನು.

ವಿವಾಹ ಕಾರ್ಯಗಳೆಲ್ಲವೂ ಸುಮುಖವಾಗಿ ನೆರವೇರಿದ ಬಳಿಕ, ವಿಲಾಸಿನೀ ರಂಗರಾಜರು ಶರತ್ಕುಮಾರನನ್ನೂ ಅವನ ತಂದೆತಾಯಿಗಳನ್ನೂ ಜತೆಯಲ್ಲಿ ಯೇ ಕರೆದುಕೊಂಡು ವಿದ್ಯಾನಗರಕ್ಕೆ ತೆರಳಿದರು. ರಂಗರಾಜನು ವಿದ್ಯಾನ ಗರವನ್ನು ಸೇರಿದ ಕೂಡಲೆ ಪ್ರಜಾವರ್ಗದವರೆಲ್ಲರೂ ಆನಂದದಿಂದ ಜಯ ಘೋಷವನ್ನು ಮಾಡಿ ಸುಮುಹೂರ್ತದಲ್ಲಿ ರಂಗರಾಜನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ವಿಧಿಗನುಸಾರವಾಗಿ ನೆರವೇರಿಸಿದ ಬಳಿಕ ಮಂತ್ರಿಗಳು ರಾಜ್ಯಭಾರವನ್ನು ಶ್ರೀಮನ್ಮಹಾರಾಜಾಧಿರಾಜ ರಂಗರಾಜ ಮಹಾರಾಜನಿಗೆ ಅರ್ಪಿಸಿದರು.

ರಂಗರಾಜನು ತನ್ನ ಪರಮಮಿತ್ರನಾದ ಶರತ್ಕುಮಾರನಿಗೆ ರಾಜಯೋಗ್ಯ ವಾದ ಅರಮನೆಯೊಂದನ್ನು ಕಟ್ಟಿಸಿಕೊಟ್ಟು ಅದರಲ್ಲಿ ಶರತ್ಕುಮಾರನನ್ನೂ ಅವನ ಮಾತಾಪಿತೃಗಳನ್ನೂ ಇಳಿಸಿ ಅವರ ಸುಖವಸತಿಗೆ ಬೇಕಾದ ಹಾಗೆ ಅನುಕೂಲ್ಯವನ್ನು ಕಲ್ಪಿಸಿ ಕೊಟ್ಟನು. ಅಂದಿನಿಂದಲೂ ರಂಗರಾಜನು ಆ ವೃದ್ಧ ಮಾತಾಪಿತೃಗಳನ್ನೇ ತನ್ನ ಮಾತಾಪಿತೃಗಳೆಂದು ತಿಳಿದು, ಅವರ ವಿಷಯದಲ್ಲಿಭ ಯಭಕ್ತಿಗಳಿಂದ ವರ್ತಿಸುತ್ತಿದ್ದನು. ರಂಗರಾಜ ಶರತ್ಕುಮಾ ರರು ಭಿನ್ನದೇಹಿಗಳಾಗಿದ್ದರೂ ಏಕಾಭಿಪ್ರಾಯವುಳ್ಳವರಾಗಿಯೂ, ಏಕೋ ದ್ಯೋಗಿಗಳಾಗಿಯೂ, ಏಕಪರಾಮರ್ಶಿಗಳಾಗಿಯೂ ಇದ್ದುಕೊಂಡು, ಇಹ ಪರಗಳಲ್ಲಿ ಶ್ರೇಯಸ್ಸನ್ನು ಪಡೆಯುವುದಕ್ಕಾಗಿ ಸದ್ಧರ್ಮಪರಾಯಣರಾಗಿ ಆನಂಧದಿಂದ ಕಾಲವನ್ನು ಕಳೆಯುತ್ತಿದ್ದರು.

ಕೆಲವು ವರ್ಷಗಳ ಮೇಲೆ ವಿಲಾಸಿನಿಯು ತನ್ನ ಗಂಡನಾದ ರಂಗರಾಜ ನನ್ನು ಕರೆದುಕೊಂಡು ರಾಜನಗರಕ್ಕೆ ಬಂದಳು. ಅಲ್ಲಿ ವಿಲಾಸಿನಿಯು ತನ್ನ ಬಾಲ್ಯದ ಗೆಳತಿಯಾದ ವಿನೋದಿನಿಯನ್ನು ನೋಡಿ ಮಾತನಾಡಿದಳು.

ವಿಲಾಸಿನಿ—ಅಕ್ಕ! ನೀನು ಹೇಗಿರುವೆ ?

ವಿನೋದಿನಿ—ತಂಗೆ ! ನೀನು ಹೇಗಿರುವೆಯಮ್ಮಾ?

ವಿಲಾಸಿನಿ— ನಿನ್ನ ದಯೆಯಿಂದ ನಾನು ಸುಖವಾಗಿರುವೆನು, ವಿನೋದ !

ವಿನೋದಿನಿ— ವಿಲಾಸ ! ನಿನ್ನ ಜತೆಯಲ್ಲಿರುವ ಪುರುಷನಾರು ? ಈತನು ನಿನಗೇನಾಗಬೇಕು ?

ವಿಲಾಸಿನಿ—ಅಕ್ಕ! ಇವರು ವಿದ್ಯಾನಗರಕ್ಕೆ ಚಕ್ರೇಶ್ವರರಾದ ಶ್ರೀಮನ್ಮಹಾರಾಜಾಧಿರಾಜ ಶ್ರೀರಂಗರಾಜ ಮಹಾರಾಜರವರು. ಇವರೇ ನನ್ನ ಪ್ರಾಣೇಶ್ವರರು.

ವಿನೋದಿನಿ—ತಂಗೆ ! ಇವರು ನಿನಗೆ ಹೇಗೆ ದೊರೆತರು ?

ವಿಲಾಸಿನಿ—ಅಕ್ಕ ! ನಂದನಗ್ರಾಮದಲ್ಲಿ ನಾವು ಓದುತ್ತಿದ್ದಾಗ, ದಾರಿಯಲ್ಲಿ ಜ್ಞಾನತಪ್ಪಿ ಬಿದ್ದಿದ್ದ ಬೀದಿಯ ಬಿಕಾರಿಯು ನಮಗೆ ಹೇಗೆ ದೊರೆತನೋ, ಇವರೂ ಹಾಗೆಯೇ ನನಗೆ ದೊರೆತಿರುವರು.

ವಿನೋದಿನಿ—ನೀನು ಹೇಳಿದುದು ನನಗೆ ಗೊತ್ತಾಗಲಿಲ್ಲ.

ವಿಲಾಸಿನಿ—ಅಕ್ಕ ! ಆ ಬೀದಿಯ ಬಿಕಾರಿಯೇ ಈಗ ರಾಜ್ಯಾಧಿಪತಿಗಳಾದ ರಂಗರಾಜರು. ವಿನೋದ ! ಆ ಸಮಯದಲ್ಲಿ “ ಹಾಗಾದರೆ ನಿನ್ನ ಕೃತ್ಯಕ್ಕೆ ನೀನು ಎಂದಾದರೊಂದು ದಿನ ಪ್ರತಿಫಲವನ್ನು ಹೊಂದಿಯೇ ಹೊಂದುವೆ” ಎಂದು ನೀನು ಹೇಳಿರಲಿಲ್ಲವೇ ? ಈಗ ಅದು ಫಲಿಸಿತು. ಆಗಿನ ನನ್ನ ಕೃತ್ಯಕ್ಕೆ ಇದೇ ಪ್ರತಿಫಲವು. ಭೂತದಯಾ ಪಶ್ಚಾತ್ತಾಪವೊಂದೇ ನನ್ನನ್ನು ಇನ್ನೂ ಮನುಷ್ಯಳನ್ನಾಗಿ ಮಾಡಿರುವುದು.

ವಿನೋದಿನಿಯು ಈ ಮಾತನ್ನು ಕೇಳಿ ಅವಮಾನದಿಂದ ತಲೆಯನ್ನು ತಗ್ಗಿಸಿಬಿಟ್ಟಳು.

ಮನುಷ್ಯನ ಪ್ರಯತ್ನವೇ ಒಂದು, ಅದೃಷ್ಟದ ಮಾರ್ಗವೇ ಒಂದು.
ಅದೃಷ್ಟ (ಪೂರ್ವಕರ್ಮ)ವೇ ಫಲಿಸೀತು.

---

ಸೌಭಾಗ್ಯಸಂಪತ್ಕುಮಾರನಿಗೆ

ಮಂಗಳಂ ಜಯಮಂಗಳಂ.